# ಮೊಳಕಾಲ್ಮೂರು ತಾಲ್ಲೂಕಿನ ಕಾಡುಗೊಲ್ಲ ಸಮುದಾಯದ ಮಹಿಳೆ

(ಕನ್ನಡ ವಿಶ್ವವಿದ್ಯಾಲಯ, ಹಂಪಿ, ಜಾನಪದ ವಿಭಾಗಕ್ಕೆ
ಎಂ.ಫಿಲ್. ಆಂಶಿಕ ಪದವಿಗಾಗಿ ಸಲ್ಲಿಸುತ್ತಿರುವ ನಿಬಂಧ)


ಸಂಶೋಧಕರು

ಜಿ. ಪಿ. ಭೀಮಣ್ಣ

ಮಾರ್ಗದರ್ಶಕರು

ಡಾ. ಹೆಬ್ಬಾಲೆ ಕೆ. ನಾಗೇಶ್

ಪ್ರವಾಚಕರು






ಜಾನಪದ ಅಧ್ಯಯನ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೦೬-೦೭

# ಮೊಳಕಾಲ್ಮೂರು ತಾಲ್ಲೂಕಿನ ಕಾಡುಗೊಲ್ಲ ಸಮುದಾಯದ ಮಹಿಳೆ

(ಕನ್ನಡ ವಿಶ್ವವಿದ್ಯಾಲಯ, ಹಂಪಿ, ಜಾನಪದ ವಿಭಾಗಕ್ಕೆ
ಎಂ.ಫಿಲ್. ಆಂಶಿಕ ಪದವಿಗಾಗಿ ಸಲ್ಲಿಸುತ್ತಿರುವ ನಿಬಂಧ)

ಸಂಶೋಧಕರು

ಜಿ. ಪಿ. ಭೀಮಣ್ಣ



ಮಾರ್ಗದರ್ಶಕರು

ಡಾ. ಹೆಬ್ಬಾಲೆ ಕೆ. ನಾಗೇಶ್

ಪ್ರವಾಚಕರು



ಜಾನಪದ ಅಧ್ಯಯನ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

೨೦೦೬-೦೭

# ಮಾರ್ಗದರ್ಶಕರ ಪ್ರಮಾಣಪತ್ರ

**ಮೊಳಕಾಲ್ಮೂರು ತಾಲ್ಲೂಕಿನ ಕಾಡುಗೊಲ್ಲ ಸಮುದಾಯದ ಮಹಿಳೆ** ಎಂಬ ನಿಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್. ಪದವಿಗಾಗಿ ಜಿ. ಪಿ. ಭೀಮಣ್ಣ ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

**ಸ್ಥಳ** : ವಿದ್ಯಾರಣ್ಯ

**ದಿನಾಂಕ** : 30/07/07

30/7/07

**ಡಾ. ಹೆಬ್ಬಾಳೆ ಕೆ. ನಾಗೇಶ್**

ಮುಖ್ಯಸ್ಥರು ಹಾಗೂ ಮಾರ್ಗದರ್ಶಕರು

ಜಾನಪದ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

## ಪ್ರಮಾಣ ಪತ್ರ

**ಮೊಳಕಾಲ್ಮೂರು ತಾಲ್ಲೂಕಿನ ಕಾಡುಗೊಲ್ಲ ಸಮುದಾಯದ ಮಹಿಳೆ** ಎಂಬ ನಿಬಂಧವನ್ನು ಡಾ. ಹೆಬ್ಬಾಲೆ ಕೆ. ನಾಗೇಶ್, ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಎಂ.ಫಿಲ್. ಪದವಿಗಾಗಿ ಸಮಾಜ ವಿಜ್ಞಾನಗಳ ನಿಕಾಯದ ಜಾನಪದ ಅಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

**ಸ್ಥಳ** : ವಿದ್ಯಾರಣ್ಯ

**ದಿನಾಂಕ** : 30/07/07

ಜಿ. ಪಿ. ಭೀಮಣ್ಣ

**ಜಿ. ಪಿ. ಭೀಮಣ್ಣ**

ಸಂಶೋಧಕರು

ಜಾನಪದ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ


ಪರಿವಿಡಿ

## ಅಧ್ಯಾಯ ಒಂದು

# ಅಧ್ಯಯನದ ಸ್ವರೂಪ ಮತ್ತು ಉದ್ದೇಶ

೧.೧ ಅಧ್ಯಯನದ ಸ್ವರೂಪ

೧.೨ ಅಧ್ಯಯನದ ಉದ್ದೇಶ

**ಕ**ರ್ನಾಟಕದಲ್ಲಿ ಅನೇಕ ಬುಡಕಟ್ಟು ಸಮುದಾಯಗಳಿವೆ. ಅವುಗಳಲ್ಲಿ ಕಾಡುಗೊಲ್ಲ ಸಮುದಾಯವೂ ಒಂದಾಗಿದೆ. ಈ ಸಮುದಾಯವನ್ನು ವಿವಿಧ ಹೆಸರುಗಳಿಂದ ಕರೆಯುವರು. ಇವರು ತಮ್ಮ ಆಚಾರ-ವಿಚಾರ, ಸಂಪ್ರದಾಯ, ಪರಂಪರೆ, ಜನನ, ಮದುವೆ, ಸಂಸ್ಕಾರ, ನಂಬಿಕೆ, ವೃತ್ತಿ ಹೀಗೆ ಹಲವಾರು ಜನಪದೀಯ ಅಂಶಗಳನ್ನು ಪ್ರತ್ಯೇಕವಾಗಿಯೇ ಕಾಯ್ದುಕೊಂಡು ಬಂದವರಾಗಿದ್ದಾರೆ. ಯಾವುದೇ ಒಂದು ಜನಾಂಗದ ಸಂಸ್ಕೃತಿಯು ನಿಂತ ನೀರಲ್ಲ. ಅದು ಹರಿಯುತ್ತಿರುವ ನೀರಿನಂತೆ ನಿತ್ಯ ಪರಿವರ್ತನಾಶೀಲವಾಗಿದೆ. ಆದರೂ ಕೂಡ ಬೇರಾವ ಅನ್ಯ ಸಂಸ್ಕೃತಿಗಳಿಗೆ ಮಾರು ಹೋಗದೆ ತನ್ನದೇ ಆದ ರೂಢಿ ಪದ್ಧತಿಗಳನ್ನು ಆಚಾರವಿಚಾರಗಳನ್ನು ಉಳಿಸಿ ಬೆಳೆಸಿಕೊಂಡು ಬಂದಿರುವ ಕಾಡುಗೊಲ್ಲ ಸಮುದಾಯ ಜನಾಂಗದ ಮಹಿಳೆಯ ಸಮಗ್ರ ಅಧ್ಯಯನ ಇದುವರೆಗೂ ಆಗದೆ ಇರುವುದು ದುರದೃಷ್ಟಕರ ಸಂಗತಿಯೆನಿಸಿದೆ. ಜನಾಂಗಿಕ ಅಧ್ಯಯನ ಮಾಡುವುದರ ಪ್ರಮುಖ ಉದ್ದೇಶವೆಂದರೆ ಕಾಲ, ಪರಿಸ್ಥಿತಿಗಳಿಗೆ ಅನುಗುಣವಾಗಿ ಇಂಥ ಜನಾಂಗದ ಸಂಸ್ಕೃತಿಯ ಕುರುಹುಗಳು ಕಾಲಗರ್ಭದಲ್ಲಿ ಮರೆಯಾಗುತ್ತಿರುವುದರಿಂದ ಜನಾಂಗಿಕ ಅಧ್ಯಯನವು ಬಹಳ ಮುಖ್ಯವಾದದ್ದು. ಅವುಗಳನ್ನು ಗ್ರಂಥ ರೂಪದಲ್ಲಿ ಹಿಡಿದಿಡುವ ಕಾರ್ಯ ಮಾಡಬೇಕಾಗಿದೆ. ಭಾರತೀಯ ಸಂಸ್ಕೃತಿಯ ಮೂಲ ಬೇರು ಜನಪದರೇ, ಜಾನಪದ ಕ್ಷೇತ್ರವು ಅನಾದಿಯಾದದ್ದು. ಈ ಕ್ಷೇತ್ರದಲ್ಲಿ ಅನೇಕ ವಿದ್ವಾಂಸರು ಕೈಗೊಂಡಿರುವರು. ಹರಿಯ ಬಸುರಿನಲ್ಲಿ ಬ್ರಹ್ಮಾಂಡ ಅಡಗಿರುವಂತೆ ಜಾನಪದ ಕುಕ್ಷಿಯಲ್ಲಿ ಜಗತ್ತೆಲ್ಲಾ ಹುದುಗಿದೆ. ಪ್ರಾಚೀನ ಅರ್ವಾಚೀನಗಳೆರಡೂ ಅದರಲ್ಲಿ ಸಂಧಿಸಿ ಪರಸ್ಪರ ಕೈಕುಲುಕುತ್ತವೆ. ಅದಕ್ಕೆ ಆದಿ ಅಂತ್ಯಗಳಿಲ್ಲ. ಅದರ ಅವಶೇಷಗಳಿಗೆ ಸಾವಿಲ್ಲ. ಆಧುನಿಕ ಮಾನವನಲ್ಲಿ ಆದಿ ಮಾನವನ ಚೇತನವೇ ಗುಪ್ತಗಾಮಿನಿಯಾಗಿ ಪ್ರವಹಿಸುತ್ತಿರುವಂತೆ, ಬೀಜದಲ್ಲಿ ವೃಕ್ಷ ಅಡಗಿರುವಂತೆ ಆಧುನಿಕ ಕಲೆ, ವಿಜ್ಞಾನ ಹಾಗೂ ತಾಂತ್ರಿಕ ಜ್ಞಾನಗಳಲ್ಲಿ ಜಾನಪದ ಚೈತನ್ಯ ಸುಪ್ತವಾಗಿರುತ್ತದೆ. ಈ ಜಾನಪದವು ಆಯಾ ಜನಾಂಗದ ನಡವಳಿಕೆಯ ಒಟ್ಟು ಮೊತ್ತವಾಗಿದೆ.

ಜನಾಂಗದ ಸಂಸ್ಕೃತಿಯನ್ನು ಸರ್ವತೋಮುಖವಾಗಿ ಅಧ್ಯಯನ ಮಾಡುವಾಗ ಯಾವುದೇ ಜನಾಂಗದ ಜೀವನ ವಿಧಾನ, ಪದ್ಧತಿಗಳನ್ನು ನಿರ್ಲಕ್ಷಿಸಲಾಗದು. ಜಗತ್ತಿನಲ್ಲಿ ಜನಾಂಗಗಳು ಉಗಮಗೊಂಡು ತಲೆ ಎತ್ತಿದಾಗಿನಿಂದ ಇಂದಿನವರೆಗೆ ಎಲ್ಲಾ ದೇಶಗಳಲ್ಲಿಯೂ ಕಾಲ ಕಾಲಕ್ಕೆ ಜನಾಂಗಗಳಲ್ಲಿ ಪರಿವರ್ತನೆಗಳು ಉಂಟಾಗಿ ಹೊಸ ಹೊಸ ರೀತಿ ನೀತಿಗಳು ರೂಪಿತಗೊಂಡಿವೆ. ಅದಕ್ಕೆ ತಕ್ಕಂತೆ ಮಾನವ ಜನಾಂಗ ತನ್ನದೇ ಆದ ವೈಶಿಷ್ಟ್ಯದೊಂದಿಗೆ ದಿಕ್ಕು ದೆಸೆಗಳನ್ನು ಕಂಡುಕೊಳ್ಳುತ್ತಾ ಸಾಗುತ್ತಿದೆ. ಜನಸಮೂಹಗಳು ಬೆಳೆದು ಜನಾಂಗವಾಗಿ ಜಗತ್ತಿನ ಬೇರೆ ಬೇರೆ ಭಾಗಗಳಲ್ಲಿ ಹೋಗಿ ನಿಂತರೂ ಮಾನವತೆ ಒಂದೇ ಎಂಬುದನ್ನು ಮರೆಯುವಂತಿಲ್ಲ. ಅವರ ಆಹಾರ, ಪಾನೀಯ, ವೇಷ-ಭೂಷಣಗಳಲ್ಲಿ ವ್ಯತ್ಯಾಸ ಕಂಡುಬಂದರೂ ಮಾನವನ ಸಮುದಾಯಗಳ ಆಶಯ ಒಲವು, ನಿಲುವು ವೃತ್ತಿ ಪ್ರವೃತ್ತಿಗಳಲ್ಲಿ ಸಾಮ್ಯವಿರುವುದನ್ನು ಕಾಣಬಹುದು. ಮಾನವ ಜನಾಂಗದ ಈ ಏಕತೆಯನ್ನು ಎತ್ತಿತೋರಿಸುವ ಮಹತ್ವದ ಕಾರ್ಯವನ್ನು ಮಾಡುತ್ತಿದೆ ಜಾನಪದ ಅಧ್ಯಯನ.

ಯಾವುದೇ ಒಂದು ಜನಾಂಗದ ಅಧ್ಯಯನವೆಂದರೆ ಆ ಜನಾಂಗದ ಜನರು ವಾಸಿಸುವ ಪ್ರದೇಶ, ಅವರ ಮೌಖಿಕ ಪರಂಪರೆ, ಸಂಪ್ರದಾಯ, ಆಚರಣೆ, ರೀತಿ-ನೀತಿ, ನಂಬಿಕೆ, ಜನನ, ಮದುವೆ, ಮರಣ, ಕೌಟುಂಬಿಕ ಜೀವನ, ಸಾಮಾಜಿಕ ಜೀವನ, ಅವರ ನಾಗರೀಕತೆ, ವೇಷ-ಭೂಷಣ ಅವರು ಅನುಸರಿಸುತ್ತ ಬಂದ ವೃತ್ತಿ ವೈವಿಧ್ಯತೆಗಳ, ಆಹಾರ-ಪಾನೀಯ ಇತ್ಯಾದಿ ಅಂಶಗಳನ್ನು ಕೂಲಂಕಷವಾಗಿ ಗಮನಿಸಬೇಕಾಗುತ್ತದೆ.

ಜಾನಪದ ಜನಾಂಗ ಸಂಸ್ಕೃತಿಯ ಅಪೂರ್ವ ಆಕರ. ಅಮೂಲ್ಯ ಭಂಡಾರ, ಶಾಬ್ದಿಕ ಅಶಾಬ್ದಿಕ ಜಾನಪದ ತಲಸ್ಪರ್ಶಿ ಅಧ್ಯಯನ ಮತ್ತು ವಿವೇಚನೆಗಳು ಜಾನಪದ ಭಂಡಾರದಲ್ಲಿ ಹುದುಗಿರುವ ವಿರಳ ವಸ್ತು ಸಂಗತಿಗಳತ್ತ

ನಮ್ಮ ಗಮನ ಸೆಳೆದಾಗ ನಾವು ವ್ಯಾಪಕ ಕ್ಷೇತ್ರಕಾರ್ಯಕ್ಕೆ ಮೊರೆ ಹೋಗುವುದು ಅನಿವಾರ್ಯ. ಆಗ ಜಾನಪದ ಒಂದು ಆನ್ವಯಿಕ ಅಧ್ಯಯನ ಎನ್ನುವ ಸತ್ಯದ ಅನುಭವವಾಗುತ್ತದೆ.

### ೧.೧ ಅಧ್ಯಯನದ ಸ್ವರೂಪ

ಕಾಡುಗೊಲ್ಲ ಸಮುದಾಯದ ಮಹಿಳೆಯ ಸ್ವರೂಪವನ್ನು ತಿಳಿಯಲು ಮೊಳಕಾಲ್ಮೂರು ತಾಲ್ಲೂಕಿನಲ್ಲಿ ನೆಲೆಸಿರುವ ಕಾಡುಗೊಲ್ಲ ಸಮುದಾಯದ ಮಹಿಳೆಯರ ಮೂಲಕ ಮಾಹಿತಿಯನ್ನು ಸಂಗ್ರಹಿಸಲಾಗಿದೆ. ಮೊಳಕಾಲ್ಮೂರು ತಾಲ್ಲೂಕು ಈ ಅಧ್ಯಯನದ ವ್ಯಾಪ್ತಿಯೂ ಹೌದು, ಮಿತಿಯೂ ಹೌದು. ಕಾಡುಗೊಲ್ಲ ಸಮುದಾಯದವರು ನೆಲೆಸಿರುವ ದಕ್ಷಿಣ ಮತ್ತು ಪಶ್ಚಿಮ ಹಾಗೂ ಉತ್ತರ, ಪೂರ್ವಕ್ಕೆ ಸಂಬಂಧಿಸಿದಂತೆ ಕೆಲವೊಂದು ಪ್ರದೇಶಗಳಲ್ಲಿ ಕ್ಷೇತ್ರಕಾರ್ಯ ಮಾಡಿ ಮಾಹಿತಿಯನ್ನು ಸಂಗ್ರಹಿಸಲಾಗಿದೆ.

ಪ್ರಸ್ತುತ ಸಂಪ್ರಬಂಧದ ವಿಷಯವು ಪೂರ್ಣ ಕ್ಷೇತ್ರಕಾರ್ಯವನ್ನು ಬಯಸುವಂಥದ್ದಾಗಿದ್ದು ಕೇವಲ ಕಾಡುಗೊಲ್ಲ ಸಮುದಾಯದವರಿಗೆ ಮಾತ್ರ ಸೀಮಿತವಾಗಿರುವುದು. ಲಿಂಗ, ವಯಸ್ಸು, ಶಿಕ್ಷಣ, ವೃತ್ತಿ ಮುಂತಾದ ಅಂಶಗಳನ್ನು ಗಮನಿಸಿ ವಿಷಯವನ್ನು ಕ್ರೋಢೀಕರಿಸಲಾಗಿದೆ. ಕ್ಷೇತ್ರಕಾರ್ಯದ ಮೂಲಕ ವಿದ್ಯಾವಂತ ಮತ್ತು ಅವಿದ್ಯಾವಂತ ಮಹಿಳೆಯರಿಂದ ಹಾಗೂ ವೃದ್ಧ ಮಹಿಳೆಯರಿಂದ ಮಾಹಿತಿಯನ್ನು ಸಂಗ್ರಹಿಸಲಾಗಿದೆ. ಹಟ್ಟಿಗಳಲ್ಲಿ, ಮನೆಯ ಭಾವಡಿಗಳಲ್ಲಿ ದೇವಸ್ಥಾನದ ಹೊರಗಡೆ ಮಾಹಿತಿಯನ್ನು ಪಡೆಯಲಾಗಿದೆ. ಸಂಭಾಷಣೆಯನ್ನು ಹಾಡುಗಳು ಮತ್ತು ವಾಕ್ಯಗಳ ಮೂಲಕ ಧ್ವನಿ ಮುದ್ರೀಕರಿಸಲಾಗಿದೆ. ಪ್ರಸ್ತುತ ಅಧ್ಯಯನವು ಹಲವು ದೃಷ್ಟಿಕೋನಗಳಿಂದ ಮಹತ್ವಪೂರ್ಣವಾಗಿದೆ.

ಮೊಳಕಾಲ್ಮೂರು ತಾಲ್ಲೂಕಿನಲ್ಲಿ ನೆಲೆಸಿರುವ ಬುಡಕಟ್ಟು ಸಮುದಾಯದವರಾದ ಹಾಗೂ ನಗರ ಗ್ರಾಮಗಳಿಂದ ಪ್ರತ್ಯೇಕವಾಗಿದ್ದು ಹಟ್ಟಿಗಳನ್ನು ಕಟ್ಟಿಕೊಂಡು ಜೀವಿಸುವ ಈ ಸಮುದಾಯ ಅದರಲ್ಲಿಯೂ ಮಹಿಳೆಯ ವೇಷ-ಭೂಷಣ, ಆಹಾರ ಪದ್ಧತಿ, ವಸತಿ ವ್ಯವಸ್ಥೆ, ವೃತ್ತಿಗಳು, ಬೆಡಗುಗಳು ರಕ್ತಸಂಬಂಧ, ಕುಟುಂಬ ಪದ್ಧತಿ, ನ್ಯಾಯ ಪದ್ಧತಿ, ವಿಧಿ-ನಿಷೇಧಗಳು ಇವುಗಳೆಲ್ಲವುದರ ಮೂಲಕ ಈ ಸಮುದಾಯದ ಮಹಿಳೆಯ ಸ್ವರೂಪವನ್ನು ಈ ಅಧ್ಯಯನದಲ್ಲಿ ಚರ್ಚಿಸಲಾಗಿದೆ. ಮುಂದಿನ ಅಧ್ಯಯನಕಾರರಿಗೆ ಈ ಕಾಡುಗೊಲ್ಲ ಸಮುದಾಯದ ಮಹಿಳೆಯ ಸಂಪ್ರಬಂಧವು ಪೂರಕವಾಗಬಲ್ಲದು ಎಂದು ಭಾವಿಸಲಾಗಿದೆ.

### ೧.೨ ಅಧ್ಯಯನದ ಉದ್ದೇಶ

ಮಾನವ ಸಮಾಜವು ಹಲವಾರು ಹಂತಗಳಲ್ಲಿ ಬೆಳೆದು ಬಂದಿದೆ. ಮೊದಲನೆಯ ಹಂತದಲ್ಲಿ ಮಾನವ ತನ್ನ ತನ್ನ ದಿನ ನಿತ್ಯದ ಆಹಾರಕ್ಕೋಸ್ಕರ ಗುಡ್ಡಗಾಡು ಪ್ರದೇಶಗಳಲ್ಲಿದ್ದು ಪ್ರಾಣಿ ಪಕ್ಷಿ ಮತ್ತು ಮೀನನ್ನು ಬೇಟೆಯಾಡಿ ಅಲೆಮಾರಿಯಾಗಿ ಜೀವಿಸುತ್ತಿದ್ದನು. ಎರಡನೆಯ ಹಂತದಲ್ಲಿ ಅವನು ಗುಡ್ಡಗಾಡು ಪ್ರದೇಶವನ್ನು ಬಿಟ್ಟು ಹುಲ್ಲುಗಾವಲುಗಳನ್ನು ಅರಸಿಕೊಂಡು ದನಕರುಗಳನ್ನು ಸಾಕಲಾರಂಭಿಸಿದನು. ಮೂರನೆಯ ಹಂತದಲ್ಲಿ ತನ್ನ ತಿರುಗಾಟ ನಿಲ್ಲಿಸಿ ವ್ಯವಸಾಯವನ್ನು ದನಕರುಗಳ ಸಹಾಯದಿಂದ ಮಾಡಲಾರಂಭಿಸಿದನು.

ಹೀಗೆ ಹಂತ ಹಂತವಾಗಿ ಬೆಳೆದು ಸ್ಥಿರವಾಗಿ ನಿಲ್ಲಲಾರಂಭಿಸಿದ. ಬೇಸಾಯದಿಂದ ಆಹಾರದ ಉತ್ಪಾದನೆಗೆ ತೊಡಗಿದ ಮೇಲೂ ಬೇಟೆಯಾಡಿ ಆಹಾರ ಸಂಗ್ರಹಿಸುವುದೂ ನಡೆದಿತ್ತು. ಆಗ ಮನೆಯ ಆವರಣದಲ್ಲಿನ ಕೆಲಸಗಳು ಹಾಗೂ ಹೊರಗಿನ ಕೆಲಸಗಳೂ ಎಂದು ಶ್ರಮ ವಿಭಜನೆಯು ಅಗತ್ಯವಾಯಿತು. ಹೆರಿಗೆ, ಬಾಣಂತಿತನ, ಮಕ್ಕಳು, ಮರಿಗಳ ಪೋಷಣೆಗಳಂತಹ ನೈಸರ್ಗಿಕ ಕರ್ತವ್ಯಗಳಿದ್ದ ಹೆಂಗಸು ಸಹಜವಾಗಿ ಮನೆಯಲ್ಲಿ ನಿಂತರೆ ಇಂತಹ ರೀತಿ ಬಾಧೆಗಳಿಲ್ಲದ ಗಂಡಸು ಅಲೆಮಾರಿತನವನ್ನು ಮುಂದುವರೆಸಿದ. ಈ ಆಹಾರ ಉತ್ಪಾದನೆಯೊಂದಿಗೆ ಶೇಖರಣೆ ಸಾಧ್ಯವಾದಾಗ ಅದರ ಮೇಲಿನ ಹಕ್ಕಿನ ಪ್ರಶ್ನೆ ಪ್ರಾರಂಭವಾಯಿತು.

ತದನಂತರ ಹೆಚ್ಚುವರಿ ಆಹಾರ ಸಂಗ್ರಹಗಳ ಮೇಲೆ ಮಾತ್ರವಲ್ಲದೆ ಮನೆಯೊಳಗಿನ ಸದಸ್ಯರ ಮೇಲೂ ಜವಾಬ್ದಾರಿಯನ್ನು ನಿಭಾಯಿಸುವ ಪದ್ಧತಿಯು ಪ್ರಾರಂಭವಾಯಿತು. ಅಂತಹದರಲ್ಲಿ ಪುರುಷನ ಜೊತೆಗೆ ಕೈಜೋಡಿಸುವ ಜವಾಬ್ದಾರಿಯನ್ನು ಹೊತ್ತುಕೊಂಡು ಸಮಪಾಲು ಹಂಚಿಕೊಂಡು ಸಮಸ್ಯೆಗಳನ್ನು ಪರಿಹರಿಸುವುದು

ಹೆಣ್ಣು. ಅದರಲ್ಲಿ ಕಾಡುಗೊಲ್ಲ ಸಮುದಾಯದ ಮಹಿಳೆಯೂ ಒಬ್ಬಳು. ಸಮಾಜದಲ್ಲಿ ಹಲವಾರು ಸಮುದಾಯಗಳಿವೆ. ಅವುಗಳಲ್ಲಿ ಕಾಡುಗೊಲ್ಲ ಸಮುದಾಯವೂ ಒಂದು.

ಇಂತಹ ಬುಡಕಟ್ಟು ಸಮುದಾಯದ ಬಗೆಗೆ ಕೆಲವು ಕೃತಿಗಳು ಮತ್ತು ಸಣ್ಣಪುಟ್ಟ ಲೇಖನಗಳು ಪ್ರಕಟಗೊಂಡಿವೆ. ಆದರೆ ಪ್ರತ್ಯೇಕವಾಗಿ ಕಾಡುಗೊಲ್ಲ ಸಮುದಾಯದ ಮಹಿಳೆಯ ಬಗ್ಗೆ ಈವರೆಗೂ ಯಾವುದೇ ತರಹದ ಕೃತಿಗಳಾಗಲಿ ಸಣ್ಣಪುಟ್ಟ ಲೇಖನಗಳಾಗಲಿ, ಸಂಶೋಧನಾ ಪ್ರಬಂಧಗಳಾಗಲಿ ಪ್ರಕಟವಾಗಿರುವುದು ಕಾಣಬರುವುದಿಲ್ಲ. ಆದ್ದರಿಂದ ನಾನು ಮೌಖಿಕ ಪರಂಪರೆಯ ಹಿನ್ನೆಲೆಯಲ್ಲಿ ಅಧ್ಯಯನವನ್ನು ಆರಂಭಿಸಿ ಜಾನಪದದಲ್ಲಿ ಮೌಖಿಕವಾಗಿ ಹರಿದುಬಂದ ಜನಪದ ಮಹಾಕಾವ್ಯ ಎಂದೇ ಖ್ಯಾತಿಯನ್ನು ಹೊಂದಿದ ಗೊಲ್ಲ ಸಮುದಾಯದಲ್ಲಿನ ಸಾಂಸ್ಕೃತಿಕ ವೀರನಾದಂತಹ ಜುಂಜಪ್ಪನನ್ನು ನಾವು ಕಂಡಿದ್ದೇವೆಯೇ ವಿನಃ ಎಲ್ಲಿಯೂ ಈ ಕಾಡುಗೊಲ್ಲ ಸಮುದಾಯದ ಮಹಿಳೆಯನ್ನು ಕುರಿತು ಪ್ರತ್ಯೇಕವಾಗಿ ಅಧ್ಯಯನ ಮಾಡಿರುವಂಥದ್ದು ಇಲ್ಲದೇ ಇರುವುದರಿಂದ ಪ್ರಸ್ತುತ ಚಿತ್ರದುರ್ಗ ಜಿಲ್ಲೆಯ ಮೊಳಕಾಲ್ಮೂರು ತಾಲ್ಲೂಕಿನಲ್ಲಿ ಬರುವ ಕಾಡುಗೊಲ್ಲ ಸಮುದಾಯದ ಮಹಿಳೆಯನ್ನು ಪ್ರಮುಖವಾಗಿಟ್ಟುಕೊಂಡು ಈ ಬಗ್ಗೆ ಪರಿಪೂರ್ಣ ಮಾಹಿತಿಯನ್ನು ಸಂಗ್ರಹಿಸಿ ನನ್ನ ಅಧ್ಯಯನವನ್ನು ಮುಂದುವರೆಸಲು ಉದ್ದೇಶಿಸಿದ್ದೇನೆ.

ಈ ನಿಬಂಧದ ಅಧ್ಯಯನವನ್ನು ಪ್ರಮುಖವಾಗಿ ಐದು ಅಧ್ಯಾಯಗಳನ್ನಾಗಿ ವಿಭಾಗಿಸಿಕೊಂಡು ಪ್ರತಿಯೊಂದು ಅಧ್ಯಾಯದಲ್ಲಿ ಕಾಡುಗೊಲ್ಲ ಸಮುದಾಯದ ಮಹಿಳೆಯನ್ನು ಚರ್ಚಿಸುವ ವಿಷಯವನ್ನು ಕುರಿತಂತೆ ಅದರ ಸಂಕ್ಷಿಪ್ತ ಸ್ವರೂಪದ ವಿವರವನ್ನು ಇಲ್ಲಿ ನೀಡಲಾಗಿದೆ.

ಎರಡನೆಯ ಅಧ್ಯಾಯದಲ್ಲಿ ಕಾಡುಗೊಲ್ಲ ಮಹಿಳೆಯ ಪರಿಕಲ್ಪನೆ ಅಂದರೆ ಅನಾದಿಕಾಲದಿಂದ ಇಂದಿನ ಆಧುನಿಕ ಯುಗದ ಮಹಿಳೆಯವರೆಗೆ ಹೇಗೆ ಯಾವ ಯಾವ ರೀತಿಯ ಸ್ಥಿತ್ಯಂತರಗಳನ್ನು ಹೊಂದುತ್ತಾ ಬಂದಿದ್ದಾಳೆ ಎಂಬುದರ ಪರಿಕಲ್ಪನೆಯನ್ನು ಕೊಡಲಾಗಿದೆ. ಇದರಲ್ಲಿಯೇ ಕಾಡುಗೊಲ್ಲ ಪದದ ಪದನಿಷ್ಪತ್ತಿಯನ್ನು ವಿವರಿಸಲಾಗಿದೆ. ಹಾಗೆಯೇ ಈ ಕಾಡುಗೊಲ್ಲ ಸಮುದಾಯದ ವಿಕಾಸದ ಹಾದಿಯನ್ನೂ ಸಹ ಕೂಲಂಕಷವಾಗಿ ವಿವರಿಸಲಾಗಿದೆ.

ಮೂರನೆಯ ಅಧ್ಯಾಯದಲ್ಲಿ ಆಚರಣೆಗಳು, ಸಂಪ್ರದಾಯ ಮತ್ತು ನಂಬಿಕೆಗಳಲ್ಲಿ ಕಾಡುಗೊಲ್ಲ ಸಮುದಾಯದ ಮಹಿಳೆಯರ ಪಾತ್ರವೇನು ಮತ್ತು ಇವುಗಳಿಗೆ ಸಮುದಾಯ ಎಷ್ಟು ಪ್ರಾಧಾನ್ಯತೆಯನ್ನು ಕೊಡುತ್ತಾರೆ ಹಾಗೂ ಈ ಮಹಿಳೆಯ ಮೇಲೆ ಹೇಗೆ ಮಾರಕವಾದ ಪ್ರಭಾವವನ್ನು ಬೀರಿ ಅವಳನ್ನು ಸಂಪೂರ್ಣವಾಗಿ ಇತರೆ ಸಮುದಾಯದ ಮಹಿಳೆಯರಿಂದ ಬೇರ್ಪಡಿಸಿ ಆಚರಣೆಗಳು ಸಂಪ್ರದಾಯ ಮತ್ತು ನಂಬಿಕೆಗಳು ಎಂಬ ಕಬ್ಬಿಣದ ಸರಪಳಿಗಳು ಅವಳನ್ನು ಸೆರೆಮನೆಗಳೆಂಬ ಹಟ್ಟಿಗಳ ಗುಡಿಸಲುಗಳಲ್ಲಿ ಬಂಧಿಯನ್ನಾಗಿಸಿವೆ ಎಂಬುದನ್ನು ಇಲ್ಲಿ ಚರ್ಚಿಸಲಾಗಿದೆ.

ನಾಲ್ಕನೆಯ ಅಧ್ಯಾಯದಲ್ಲಿ ಸಮಕಾಲೀನ ಸಂದರ್ಭದಲ್ಲಿ ಗೊಲ್ಲಮಹಿಳೆಯ ಸಮಷ್ಠಿ ಪ್ರಜ್ಞೆಯಲ್ಲಿ ಸಾಮಾಜಿಕ ನೆಲೆಯಲ್ಲಿ ಮಹಿಳೆಯ ವೇಷ-ಭೂಷಣ, ಆಹಾರ ಪದ್ಧತಿ, ವಸತಿ ವ್ಯವಸ್ಥೆ, ವೃತ್ತಿಗಳು, ಬೆಡಗುಗಳು, ರಕ್ತಸಂಬಂಧ, ಕುಟುಂಬ ಪದ್ಧತಿ, ನ್ಯಾಯ ಪದ್ಧತಿ, ವಿಧಿ-ನಿಷೇಧಗಳು ಹೇಗೆ ಅವಳನ್ನು ಸಾಂಸ್ಕೃತಿಕವಾಗಿ ರೂಪಿಸಿವೆಯೆಂಬುದನ್ನು ಮತ್ತು ಪಾರಂಪರಿಕವಾಗಿ ಅವಳ ಮೇಲೆ ನಿರ್ದಿಷ್ಟ ಬದುಕಿನ ವಿಧಾನವೊಂದನ್ನು ಹೇರಲಾಗಿದೆಯೆಂಬುದನ್ನು ವಿಶ್ಲೇಷಿಸಲಾಗಿದೆ. ಅಲ್ಲದೆ ಅವಳು ಈ ಬದುಕಿನ ತೊರೆಯಿಂದ ಆಧುನಿಕ ಜಗತ್ತಿನ ಪ್ರವಾಹದ ಜೊತೆ ಬೆರೆಯುವಲ್ಲಿ ಉಂಟಾಗುವ ಸ್ಥಿತ್ಯಂತರ ಕಾಲದ ತಳಮಳ, ಸಂಕ್ರಮಣಾವಸ್ಥೆಯನ್ನು ಇಲ್ಲಿ ವಿಶ್ಲೇಷಿಸಲಾಗಿದೆ.

ಈ ಸಮುದಾಯದ ಮಹಿಳೆ ಎಷ್ಟೇ ಅವಿರತವಾಗಿ ದುಡಿದರೂ ಅವಳು ಸಬಲಳಾಗದೆ ದುರ್ಬಲಳಾಗಿ ಯಾವ ರೀತಿಯ ಆರ್ಥಿಕ ನೆಲೆಯನ್ನು ಹೊಂದಿದ್ದಾಳೆಂಬುದನ್ನು ಕುರಿತು ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ. ಇಲ್ಲಿ ಮಹಿಳೆ ಎಷ್ಟೇ ದುಡಿದರೂ ಸಹ ಅವಳು ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ನಗಣ್ಯವಾಗಿಯೇ ಗೋಚರಿಸುತ್ತಿದ್ದಾಳೆ. ಶೈಕ್ಷಣಿಕವಾಗಿ ಇಲ್ಲಿ ಮಹಿಳೆಯು ಹಿಂದುಳಿಯಲು ಈ ಸಮುದಾಯದ ಗೊಡ್ಡು ಸಂಪ್ರದಾಯಗಳು, ನಂಬಿಕೆಗಳು ಹಾಗೂ ಅರ್ಥವಿಹೀನ ಆಚರಣೆಗಳು, ಬಡತನ, ದಾರಿದ್ರ್ಯ ಅವಳನ್ನು ಅಜ್ಞಾನದ ಅಂಧಕಾರದಲ್ಲಿ ನೂಕಿವೆ ಎಂಬ ವಿಷಯದ ಬಗ್ಗೆ ಪ್ರಸ್ತಾಪಿಸಲಾಗಿದೆ.

ಸಾಂಸ್ಕೃತಿಕವಾಗಿ ಈ ಸಮುದಾಯದ ಮಹಿಳೆ ಇಂದು ಪಲ್ಲಟಗಳನ್ನು ಹೊಂದುತ್ತಿದ್ದಾಳೆ. ಅನೂಚಾನವಾಗಿ ಆಚರಿಸಿಕೊಂಡು ಬರುತ್ತಿದ್ದ ಸಂಪ್ರದಾಯಗಳ ಕಾಠಿಣ್ಯ ಆಧುನಿಕತೆಯ ಪ್ರಭಾವದಿಂದಾಗಿ ಸಡಿಲವಾಗುತ್ತಿದೆ. ಈ ಬುಡಕಟ್ಟು ಸಮುದಾಯದ ಮಹಿಳೆ ತನ್ನ ಬುಡಕಟ್ಟು ಸ್ವರೂಪದಿಂದ ನಿಧಾನಕ್ಕೆ ಬಿಡುಗಡೆ ಹೊಂದುತ್ತಾ ಮುಖ್ಯ ಪ್ರವಾಹದ ಜೊತೆ ಸೇರಲು ಹೇಗೆ ತವಕಿಸುತ್ತಿದ್ದಾಳೆ ಎಂಬುದನ್ನು ಚರ್ಚಿಸಲಾಗಿದೆ. ಈ ಹಂತದಲ್ಲಿನ ಸಾಂಸ್ಕೃತಿಕ ಪಲ್ಲಟಗಳನ್ನು ಈ ಅಧ್ಯಯನದಲ್ಲಿ ವೈಜ್ಞಾನಿಕವಾಗಿ ದಾಖಲಿಸಲಾಗಿದೆ.

ಐದನೆಯ ಅಧ್ಯಾಯದಲ್ಲಿ ಕಾಡುಗೊಲ್ಲ ಸಮುದಾಯದ ಮಹಿಳೆಯು ಯಾವ ಬಗೆಯ ಬಿಕ್ಕಟ್ಟುಗಳನ್ನು ಅನುಭವಿಸುತ್ತಿದ್ದಾಳೆ. ಹಾಗೆಯೇ ಸವಾಲುಗಳನ್ನು ಎದುರಿಸುತ್ತಿದ್ದಾಳೆ ಎಂಬುದನ್ನು ಹೇಳಲು ಪ್ರಯತ್ನಿಸಲಾಗಿದೆ.

ಜಗತ್ತಿನಲ್ಲಿ ಅನೇಕ ಸಮುದಾಯಗಳಿವೆ. ಈ ಸಮುದಾಯಗಳು ಭಾರತದಲ್ಲಿ ಕಂಡುಬರುವ ಜನಸಮುದಾಯಗಳಿಗಿಂತ ಭಿನ್ನವಾದವು ಅಲ್ಲದೆ ವಿಶಿಷ್ಟ ಸಂಸ್ಕೃತಿ ಮತ್ತು ಪರಂಪರೆಯನ್ನು ಹೊಂದಿರತಕ್ಕಂತಹವು. ಇಂತಹ ಅನೇಕ ಸಮುದಾಯಗಳನ್ನು ಅನೇಕ ವಿದ್ವಾಂಸರು ಬಹಳ ಹಿಂದಿನಿಂದಲೂ ಅಧ್ಯಯನ ಮಾಡುತ್ತಾ ಬಂದಿರುತ್ತಾರೆ. ಅವುಗಳಲ್ಲಿ ನಿರ್ಲಕ್ಷಿತ ಸಮುದಾಯಗಳೂ ಕೆಲವು. ಉಳಿದವುಗಳನ್ನು ಸರ್ಕಾರ ಮತ್ತು ವಿದ್ವಾಂಸರು ಚಳವಳಿ ರೂಪದಲ್ಲಿ ಸಾಮಾಜಿಕ ಸಮುದಾಯಗಳ ಹುಡುಕಾಟದಲ್ಲಿ ತೊಡಗಿದ್ದರೆ, ಇನ್ನು ಕೆಲವು ಸಮುದಾಯಗಳು ತಮ್ಮ ಪರಂಪರೆ ಮತ್ತು ಮೂಲ ಸಂಸ್ಕೃತಿಯನ್ನು ಉಳಿಸಿಕೊಳ್ಳಲು ಸಾಧ್ಯವಾಗದೆ ಆಧುನಿಕ ಸಮಾಜದ ಸಂಸ್ಕೃತಿಯನ್ನು ಸಂಪೂರ್ಣವಾಗಿ ಒಪ್ಪಿಕೊಳ್ಳದೆ ತೊಳಲಾಟದಲ್ಲಿ ಸಿಲುಕಿವೆ. ಇಂತಹ ಅಂಚಿನ ಸಮುದಾಯಗಳಲ್ಲಿ ಕರ್ನಾಟಕದ ಕಾಡುಗೊಲ್ಲ ಮಹಿಳೆಯ ಸಮುದಾಯವೂ ಒಂದಾಗಿದೆ.

ಕಾಡುಗೊಲ್ಲ ಸಮುದಾಯದ ಸಾಮಾಜಿಕ, ಆರ್ಥಿಕ, ರಾಜಕೀಯ ಮತ್ತು ಶೈಕ್ಷಣಿಕ ಇವುಗಳಿಂದ ಹಿಂದುಳಿದಿದ್ದು ತನ್ನದೇ ಆದ ಸಾಮಾಜಿಕ ಸಂಘಟನೆಯನ್ನು ಹೊಂದಿದೆ. ಇತ್ತೀಚಿಗೆ ಮಹಿಳಾ ಸಮಾಜದಲ್ಲಿ ಉಂಟಾದ ಪರಿವರ್ತನೆಯಿಂದಾಗಿ ಗೊಲ್ಲ ಸಮುದಾಯವು ಸಾಮಾಜಿಕ ಸಂಚಲನೆಯನ್ನು ಹೊಂದಿದೆ. ಮೂಲ ಸಂಸ್ಕೃತಿಯನ್ನು ಹೊಂದಿದೆ. ಈ ಸಮುದಾಯವು ಇತಿಹಾಸ ಮತ್ತು ಸಂಸ್ಕೃತಿ ಬೇರೆ ಸಮುದಾಯಗಳಿಗಿಂತ ಭಿನ್ನವೂ ವಿಶಿಷ್ಟವೂ ಆಗಿದೆ.

**೨.೧ ಪರಿಕಲ್ಪನೆ**

ಎಲ್ಲಾ ಜಾತಿ ಜನಾಂಗ ಬುಡಕಟ್ಟುಗಳ ಮೂಲ ಹುಟ್ಟಿನ ಸ್ಥಳದ ಬಗ್ಗೆ ಇರುವ ಐತಿಹ್ಯ, ಪುರಾಣಗಳ ಹಾಗೆಯೇ ಕಾಡುಗೊಲ್ಲ ಜನಾಂಗದ ಮೂಲ ಉಗಮದ ಬಗ್ಗೆ ಹಲವು ಪುರಾಣಗಳಿವೆ. ಕಾಡುಗೊಲ್ಲರು ದೆಹಲಿ ಮತ್ತು ಸುತ್ತಮುತ್ತಲಿನ ಪ್ರದೇಶಗಳಲ್ಲಿ ವಾಸಿಸುತ್ತಿದ್ದರು ಎಂಬುದು ಆಶ್ಚರ್ಯವಾದರೂ ಮೊಘಲರ ಕಾಲಕ್ಕೆ ಅವರು ಹಿಂಸೆ ತಾಳಲಾರದೆ ದಕ್ಷಿಣ ಭಾರತಕ್ಕೆ ವಲಸೆ ಬಂದರು. ಇವರು ಪ್ರಮುಖವಾಗಿ ಬುಡುಕಟ್ಟು ಸಮುದಾಯದವರಾಗಿದ್ದಾರೆ. ಚಿತ್ರದುರ್ಗ, ತುಮಕೂರು, ಬಳ್ಳಾರಿ, ರಾಯಚೂರು, ದಾವಣಗೆರೆ ಜಿಲ್ಲೆಗಳಲ್ಲಿ ಅತಿ ಹೆಚ್ಚಿನ ಸಂಖ್ಯೆಯಲ್ಲಿ ಕಂಡುಬರುತ್ತಾರೆ. ಇವರ ನೆಲೆ ಬಯಲು ಪ್ರದೇಶಗಳ ದಿನ್ನೆ, ಗುಡ್ಡಗಳಿಂದ ಕೂಡಿದ್ದು ಮುಖ್ಯ ಹಳ್ಳಿಗಳಿಂದ ಬಹುದೂರವಿರುತ್ತದೆ. ಕಾಡುಗೊಲ್ಲ ಬುಡಕಟ್ಟಿನವರು ಇತರೆ ಜಾತಿ ಜನಾಂಗಗಳಿಂದ ಸಂಪೂರ್ಣ ಪ್ರತ್ಯೇಕವಾಗಿದ್ದು ತಮ್ಮ ಬುಡಕಟ್ಟಿನ ಸಂಪ್ರದಾಯವನ್ನು ಉಳಿಸಿಕೊಂಡಿದ್ದಾರೆ. ಇವರು ವಾಸಿಸುವ ಜಾಗಗಳಿಗೆ ಗೊಲ್ಲರ ಹಟ್ಟಿಗಳೆಂದು ಕರೆಯಲಾಗುತ್ತದೆ.

ಇತರೆ ಸಮುದಾಯಗಳೊಡನೆ ಗುರುತಿಸಿಕೊಳ್ಳಲು ಇಷ್ಟಪಡದ ಇವರು ಸದಾ ದೂರ ತಮ್ಮದೇ ಆದ ಗುಡಿಸಲುಗಳ ಸಮೂಹವನ್ನು ಕಟ್ಟಿಕೊಂಡು ನಿರ್ದಿಷ್ಟ ಜಾಗದಲ್ಲಿ, ನಿಗಧಿಗೊಳಿಸಿದ ಪ್ರದೇಶದಲ್ಲಿ ವಾಸಮಾಡುವಂತವರು ಎಂದು ಡಾ. ಹಿ. ಚಿ. ಬೋರಲಿಂಗಯ್ಯನವರು ಅಭಿಪ್ರಾಯ ಪಡುತ್ತಾರೆ. ಕಾಡುಗೊಲ್ಲರು ಪ್ರಮುಖವಾಗಿ ಉತ್ತರ ಭಾರತದಿಂದ ಬಂದವರು. ಇವರ ಸಂಪ್ರದಾಯ ಕಾಡುಕುರುಬರ ಸಂಪ್ರದಾಯವನ್ನು ಹೋಲುತ್ತದೆ. ಇವರು ವಾಸಮಾಡುವ ಪ್ರದೇಶಗಳು ನಾಗರಿಕ ಸೌಲಭ್ಯಗಳಿಂದ ವಂಚಿತವಾಗಿವೆ.

- ಹಾಗಾದರೆ ಕಾಡುಗೊಲ್ಲರ ಮಹಿಳೆಯ ಪಾತ್ರವೇನು? ಅದರ ಪರಿಕಲ್ಪನೆಯೇನು? ಎಂಬುದು ಮುಖ್ಯವಾದ ಅಂಶಗಳಾಗಿವೆ.
- ಕಾಡುಗೊಲ್ಲರ ಇತಿಹಾಸ ಸೃಷ್ಟಿಗೆ ಮಹಿಳೆಯೇ ಆಧಾರ ಸ್ತಂಭ.

- ಕಾಡುಗೊಲ್ಲರ ವಂಶ ಬೆಳೆಯುವುದಕ್ಕೆ ಇವಳೇ ಆಧಾರ ಸ್ತಂಭ ಮತ್ತು ಆದಿದೇವತೆ.
- ಕಾಡುಗೊಲ್ಲರು ಇವಳನ್ನು ದೇವರಿಗೆ ಹೋಲಿಕೆ ಮಾಡಿ ಪೂಜೆ ಮಾಡುತ್ತಾರೆ.
- ಕಾಡುಗೊಲ್ಲರು ಪ್ರಮುಖವಾಗಿ ಅನಕ್ಷರಸ್ಥರಾದರೂ ಮಹಿಳೆಯ ಮಾತಿನಂತೆ ಅವರು ಕಾಯಕದಲ್ಲಿ ಮಗ್ನರಾಗುತ್ತಾರೆ.
- ಬೇರೆ ಬುಡಕಟ್ಟು ಜನಾಂಗದಿಂದ ಇವರ ಬುಡಕಟ್ಟು ಸಂಪೂರ್ಣ ಭಿನ್ನವಾಗಿದೆ. ಇವರು ಹುಲ್ಲಿನ ಗುಡಿಸಲುಗಳಲ್ಲಿ ವಾಸಮಾಡುತ್ತಾ ಪಶುಪಾಲನೆ ವೃತ್ತಿಗೆ ಪೂರಕವಾಗಿ ತಮ್ಮದೇ ಆದ ಸಂಸ್ಕೃತಿಯನ್ನು ಹೊಂದಿದ್ದಾರೆ.
- ಇವರ ಜೀವನವೆಲ್ಲಾ ನಗರ ಪಟ್ಟಣ ಮತ್ತು ಹಳ್ಳಿ ಜನರಿಗಿಂತ ದೂರ. ಇವರು ಅತ್ಯಂತ ಹಿಂದುಳಿದ ಬುಡಕಟ್ಟು ಮತ್ತು ಅಲೆಮಾರಿ ಜನಗಳಾಗಿದ್ದಾರೆ. ಶೈಕ್ಷಣಿಕ, ಸಾಮಾಜಿಕ, ರಾಜಕೀಯ, ಆರ್ಥಿಕ ಈ ಎಲ್ಲಾ ಕ್ಷೇತ್ರಗಳಲ್ಲಿ ಹಿಂದುಳಿದಿದ್ದಾರೆ.
- ಈ ಸಮುದಾಯದಲ್ಲಿ ಅನೇಕ ಒಳಪಂಗಡಗಳಿವೆ. ಅವುಗಳಲ್ಲಿ ಚಿತ್ತಮುತ್ತಿ, ಚಂದಮುತ್ತಿ ಮತ್ತು ರಾಮೇಗೌಡನ ಕುಲದವರು ಅಷ್ಟೇ ಅಲ್ಲದೆ ಊರಗೊಲ್ಲರು, ಹಾವುಗೊಲ್ಲರು, ಭಜಂತ್ರಿ ಗೊಲ್ಲರು, ವೈದ್ಯ ಗೊಲ್ಲರು, ಹಂದಿಗೊಲ್ಲರು, ಹೆಳವ ಗೊಲ್ಲರು, ತಾಳಿಕಟ್ಟದ ಗೊಲ್ಲರು, ದಾಸಗೊಲ್ಲರು, ಪೆದ್ದಟ್ಟಿ ಗೊಲ್ಲರು ಇತರೆ ಬಗೆಯ ಗೊಲ್ಲರೆಲ್ಲರೂ ಕಾಡುಗೊಲ್ಲರಾಗಿದ್ದಾರೆ.

ಕರ್ನಾಟಕದ ಕಾಡುಗೊಲ್ಲ ಜನಾಂಗದವರು ಮಹಿಳೆಗೆ ವಿಶೇಷವಾದ ಮಹತ್ವವನ್ನು ನೀಡಿದ್ದಾರೆ. ಅವಳು ಮನೆಯ ಒಡತಿ. ದೂರದೃಷ್ಟಿಯ ಬೆಳಕು. ಗಂಡನ ಕಾಯಕದಲ್ಲಿ ಸಹಭಾಗಿಯಾಗುವಳು. ಜೀವನ ನಿರ್ವಹಣೆಯಲ್ಲಿ ಮಹತ್ತರ ಪಾತ್ರ ವಹಿಸುವಳು. ಮಕ್ಕಳ, ಮನೆಯ, ಆರ್ಥಿಕ ಸ್ಥಿತಿಯನ್ನು ಚಿಂತನೆಯ ಮುಖಾಂತರ ದೂರಮಾಡುವಂತವಳು. ಈರೀತಿಯಾಗಿ ಕಾಡು ಗೊಲ್ಲರ ಸಮುದಾಯದಲ್ಲಿ ಮಹಿಳೆ ಒಂದು ಪ್ರಧಾನವಾದ ಪಾತ್ರವನ್ನು ನಿರ್ವಹಿಸುವಂಥವಳಾಗಿದ್ದು, ಅವಳಿಲ್ಲದೆ ಆ ಜನಾಂಗವೇ ಇಲ್ಲ. ವಾಸಸ್ಥಳದಿಂದ ಹಿಡಿದು ಆಹಾರ, ಉಡುಗೆ, ತೊಡುಗೆ, ಭಾಷೆ, ಇತರೆ ಜನಾಂಗದವರೊಡನೆ ಸಂಬಂಧ, ಸಾಮಾಜಿಕ ಭದ್ರತೆ, ಆರ್ಥಿಕ ಏಳಿಗೆ, ಶೈಕ್ಷಣಿಕ ಮಟ್ಟ ಸುಧಾರಣೆ, ಸಾಂಸ್ಕೃತಿಕ ಆಚರಣೆಗಳು ಪ್ರತಿಯೊಂದು ಮಹಿಳೆಯ ಮೂಲಪಾತ್ರದಿಂದ ಕೂಡಿದೆ.

ಪುರುಷ ಅವಲಂಬಿತ ಕುಟುಂಬ ವ್ಯವಸ್ಥೆ ಇದ್ದರೂ ಸಹ ಮಹಿಳೇ ಪರೋಕ್ಷವಾಗಿ ಮಾತೃಪ್ರಧಾನ ವ್ಯವಸ್ಥೆಯನ್ನು ಈ ಸಮುದಾಯದಲ್ಲಿ ಪ್ರತಿನಿಧಿಸುವಂತವಳಾಗಿದ್ದಾಳೆ. ಕಾಡುಗೊಲ್ಲ ಸಮುದಾಯದಲ್ಲಿ ಮಹಿಳೆಯ ಮುಗ್ಧತನವನ್ನು ಕಾಣಬಹುದು. ಏಕೆಂದರೆ ಇವಳು ಅನಕ್ಷರಸ್ಥಳು, ನಂಬಿಕೆಯ ಅರಮನೆಯಲ್ಲಿ ವಾಸಮಾಡುವಂಥವಳು, ಸದಾ ಹೊಸ ಹೊಸ ಬಯಕೆಗಳ ಕನಸುಗಳಲ್ಲಿಯೇ ಜೀವನ ಮಾಡುವಂಥವಳು. ಈ ಸಮುದಾಯದಲ್ಲಿ ಮಹಿಳೆ ಧೈರ್ಯಶಾಲಿ. ತನ್ನ ಗಂಡನಿಗೆ, ಮಕ್ಕಳಿಗೆ ಹಾಗೂ ಮನೆಯ ಇತರ ಸದಸ್ಯರಿಗೆ ಬೇಟೆಯಾಡಲು ಪರೋಕ್ಷವಾಗಿ ಬೆಂಬಲ ನೀಡುವಳು. ಉಪಾಯ ತಿಳಿಸುವ ಮೂಲಕ ಮಾರ್ಗದರ್ಶಿಯಾಗುವಳು.

ಕಾಯಕ ನಿಷ್ಠೆಯಲ್ಲಿ ಈ ಸಮುದಾಯದ ಮಹಿಳೆ ಒಂದು ಹೆಜ್ಜೆ ಮುಂದೆಯೇ ಇದ್ದಾಳೆ. ಮನೆಯ ಕೆಲಸ, ದನಕರುಗಳ ಪಾಲನೆ ದವಸ ಧಾನ್ಯದ ಕೆಲಸ, ಮಕ್ಕಳ ಲಾಲನೆ ಪಾಲನೆ ಹೀಗೆ ನೂರೆಂಟು ಕಾರ್ಯಗಳು ಅವಳದ್ದು. ಇವಳಿಲ್ಲದೇ ಯಾವುದೊಂದು ಕಾರ್ಯವು ಸುಗಮವಾಗದು.

ಅಡುಗೆ ಮಾಡುವುದರಲ್ಲಿ ಗೊಲ್ಲ ಮಹಿಳೆ ಇತರೆ ಸಮುದಾಯಗಳ ಮಹಿಳೆಗಿಂತ ಭಿನ್ನ. ಕಾಡಿನ ಸಸ್ಯ ಪಾಕಗಳನ್ನು ಬಳಸಿ ಮಾಂಸಾಹಾರ ಮತ್ತು ಸಸ್ಯಾಹಾರವನ್ನು ರುಚಿಕಟ್ಟಾಗಿ ಮಾಡುವಂಥದ್ದು ಅವಳಿಗೆ ಗೊತ್ತು.

ಹಿರಿಯರ ಜೊತೆ ನಯ ವಿನಯ ವಿಧೇಯತೆ ಸಂಬಂಧ ಪಾಲನೆ ಇದು ಅವಳಿಗೆ ಹುಟ್ಟಿದಾಗಿನಿಂದಲೇ ಬಂದಿರುವಂಥದ್ದು. ಸಹೋದರ ಸಹೋದರಿಯರ ಸಂಬಂಧ ಅವಿನಾಭಾವದಿಂದ ಕೂಡಿರುವಂಥದ್ದು. ತವರಿನ ಹಂಬಲ, ತವರಿನ ಏಳ್ಗೆ ಹಚ್ಚ ಹಸಿರಾಗಿರಲೆಂದು ಆಶಿಸುವಂಥವಳು.

ತನ್ನ ಸಂಬಂಧದಲ್ಲಿಯೇ ವೈವಾಹಿಕ ಸಂಬಂಧಗಳನ್ನು ಬೆಳೆಸಲು ಇಷ್ಟಪಡುವಂಥವಳು. ಅಲ್ಲದೆ ಹೃದಯ ಶ್ರೀಮಂತಿಕೆಯ ಪುರುಷನಿಗೆ ತನ್ನನ್ನು ಸಮರ್ಪಿಸಿಕೊಳ್ಳುವಂತಹ ಸರ್ವ ಸಮರ್ಪಣಾಭಾವವನ್ನು ಹೊಂದಿರುವಂಥವಳು.

ಗೊಲ್ಲ ಸಮುದಾಯದ ಮಹಿಳೆ ಅವಳು ತೊಡುವ ಉಡುಗೆಯಲ್ಲಿ ಅವಳ ಸಾರ್ಥಕತೆಯ ಜೀವನವನ್ನು ಕಾಣಬಹುದು. ಏಕೆಂದರೆ ಮನೆಯ ಸಂಕಷ್ಟವನ್ನು ನೀಗಲು ಅವಳು ಕುಪ್ಪಸವನ್ನು ತೊಡುವಂತಿಲ್ಲ. ಇದಕ್ಕೆ ಪೂರಕವಾಗಿಯೇ ದೈವ ಭಕ್ತಿಯೂ ಒಂದಾಗಿದೆ.

ಗೊಲ್ಲ ಸಮುದಾಯುದ ಮಹಿಳೆ ಭಕ್ತಿಯ ಚೇತನವಾಗಿರುವಳು. ಏಕೆಂದರೆ ಅವಳ ಜೀವನದಲ್ಲಿ ಗಂಡ ಸತ್ತರೆ ಅವಳು ಸುಮಂಗಲಿಯಾಗಿಯೇ ಇರುತ್ತಾಳೆ. ಬೇರೆ ಸಮುದಾಯದಲ್ಲಿ ಈ ರೀತಿ ಇಲ್ಲ. ಇದಕ್ಕೆ ಕಾರಣ ಅವಳಲ್ಲಿರುವ ನಂಬಿಕೆಯೆಂದರೆ ನನ್ನ ಗಂಡ ಶ್ರೀಕೃಷ್ಣ ಪರಮಾತ್ಮನಾಗಿರುವುದರಿಂದ ಅವನಿಗೆಂದಿಗೂ ಸಾವಿಲ್ಲ ಎಂಬ ನಂಬಿಕೆ ಅವರಲ್ಲಿದೆ. ಅದಕ್ಕಾಗಿಯೇ ಅವರು 'ಕೃಷ್ಣ ಕಡಗ' ಅಥವಾ 'ಗೊಲ್ಲ ಕಡಗ' ಧರಿಸುವರು.

ಗೊಲ್ಲ ಸಮುದಾಯದ ಮಹಿಳೆಗೆ ಅವಳ ಪೂರ್ವಿಕರ ಹೆಸರುಗಳನ್ನು ನಾಮಕರಣ ಮಾಡುತ್ತಾರೆ. ಇವಳ ಭಾಷೆ ತನ್ನ ಸಮುದಾಯಿದ ಭಾಷೆಯೇ ಆಗಿರುತ್ತದೆ. ಗೊಲ್ಲ ಸಮುದಾಯದ ಮಹಿಳೆ ಇತರೆ ಸಮುದಾಯದ ಮಹಿಳೆಯೊಂದಿಗೆ ಅವಿನಾಭಾವ ಸಂಬಂಧವನ್ನು ಹೊಂದಿದ್ದಾಳೆ. ಅವಳು ಬೇರೆ ಸಮುದಾಯದವರಿಂದ ಮಹಿಳೆಯಲ್ಲಿ ತನ್ನ ಸಂಪೂರ್ಣ ಅಭಿಪ್ರಾಯಗಳನ್ನು, ಆಸಕ್ತಿಗಳನ್ನು ಮುಂದಿಡುವಳು. ಅವರಲ್ಲಿ ಗೆಳೆತನ, ನಂಬಿಕೆ, ಸಹಾಯ, ಗೌರವ, ಪ್ರೀತಿ, ವಿಶ್ವಾಸ ಹೊಂದಿರುವುದು ಮೊದಲಾಗಿ ಎಲ್ಲಾ ಅಂಶಗಳನ್ನು ಈ ಮಹಿಳೆಯಲ್ಲಿ ಕಾಣಬಹುದು.

ಇತ್ತೀಚಿನ ದಿನಗಳಲ್ಲಿ ಅಭಿವೃದ್ಧಿ ಪಥದತ್ತ ಸಾಗಿರುವ ಸಮುದಾಯ ಎಲ್ಲಾ ರಂಗಗಳಲ್ಲಿ ಬದಲಾವಣೆ ಕಂಡಿದೆ. ಇದಕ್ಕೆ ಮುಖ್ಯ ಕಾರಣ ಸ್ತ್ರೀ ಚಿಂತನೆಗಳು, ಸ್ತ್ರೀ ವಾದಗಳು, ಸ್ತ್ರೀಯರ ಸ್ಥಾನಮಾನಗಳು, ಸ್ತ್ರೀಯರ ಅಮೋಘ ಕೊಡುಗೆಗಳು ಪ್ರಮುಖವಾದವುಗಳಾಗಿವೆ.

ಸರ್ಕಾರವು ಹಿಂದುಳಿದ ಬುಡಕಟ್ಟು ಸಮುದಾಯವಾದ ಇದಕ್ಕೆ ಎಲ್ಲಾ ರೀತಿಯಿಂದಲೂ ಸಹಾಯವನ್ನು ಮಾಡಿದೆ. ಶಿಕ್ಷಣಕ್ಕೆ ವಸತಿಗೆ, ಉದ್ಯೋಗಕ್ಕೆ ಧನ ಸಹಾಯವನ್ನು ಮಾಡಿದೆ. ಅವರ ಅಭಿವೃದ್ಧಿ ಕಡೆಗೆ ಗಮನ ಹರಿಸಿದೆ.

ಗೊಲ್ಲ ಸಮುದಾಯದ ಮಹಿಳೆಯರು ಇಂದು ವಿದ್ಯಾವಂತರಾಗಿ ಸಮುದಾಯದ ಸ್ಥಿತಿಗತಿಗಳನ್ನೆ ಬದಲಾವಣೆ ಮಾಡಿದ್ದಾರೆ. ಅವರಲ್ಲಿ ಪ್ರಮುಖವಾಗಿ ಶ್ರೀಮತಿ ಪೂರ್ಣಿಮ ಪ್ರಕಾಶ ಮತ್ತು ಶ್ರೀಮತಿ ನಿರ್ಮಲಾ ನಾಗಪ್ಪ ಮುಂತಾದವರು ಸಮುದಾಯದ ಅಭಿವೃದ್ಧಿಯಲ್ಲಿ ಗಣನೀಯ ಪಾತ್ರ ವಹಿಸಿದ್ದಾರೆ. ಇವರು ಮೂಲತಃ ಗೊಲ್ಲ ಸಮುದಾಯದವರು.

ಈ ರೀತಿಯಾಗಿ ಕಾಡುಗೊಲ್ಲ ಸಮುದಾಯದ ಮಹಿಳೆ ಮಣ್ಣಿನ ಮುದ್ದೆಯಾಗಿ ಕಾಡಿನಲ್ಲಿ ಅನಾಗರೀಕಳಾಗಿ ತನ್ನದೇ ಆದ ಸಮುದಾಯದ ಸಂಪ್ರದಾಯಗಳು, ನಂಬಿಕೆಗಳು, ಆಚರಣೆಗಳಲ್ಲಿ ತೊಡಗಿಕೊಂಡು ಇಂದಿನ ಆಧುನಿಕ ಯುಗದ ಆರ್ಥಿಕ, ಸಾಮಾಜಿಕ, ಶೈಕ್ಷಣಿಕ, ಮುಂದುವರೆದ ಪಾಶ್ಚಾತ್ಯ ಸಂಸ್ಕೃತಿಯ ಪ್ರಭಾವ ಮತ್ತು ಪ್ರೇರಣೆಗಳಿಂದ ಮುಂದುವರೆದು ಮಣ್ಣಿನ ಮುದ್ದೆಯಂತಿದ್ದ ಇವಳು ಒಂದು ಸುಂದರ ಬೊಂಬೆಯಂತೆ ಕಂಗೊಳಿಸುತ್ತಿದ್ದಾಳೆ.

**೨.೨ ಕಾಡುಗೊಲ್ಲ ಪದದ ನಿಷ್ಪತ್ತಿ**

'ಗೊಲ್ಲ' ಎಂಬ ಪದವು ವೃತ್ತಿಯನ್ನು ಸೂಚಿಸುವ ಪದವಾಗಿದೆ. ಗೋವುಗಳ ಪಾಲಕನೇ ಗೊಲ್ಲ ಎಂದು ಕರೆಯಲಾಗುತ್ತದೆ. 'ಗೊಲ್ಲ' ಎಂದರೆ ಗೋವುಗಳನ್ನು ಕಾಯುವವನು ಎಂದು, 'ಕಾಡುಗೊಲ್ಲ' ಎಂದರೆ ಕಾಡಿನಲ್ಲಿ ವಾಸಿಸುವ ಗೊಲ್ಲನೆಂದು ತೀ. ನಂ. ಶಂಕರನಾರಾಯಣ ಅವರು ಅರ್ಥೈಸುತ್ತಾರೆ.* ಗೊಲ್ಲ ಸಮುದಾಯದವರನ್ನು 'ಅಡವಿ ಗೊಲ್ಲರು', 'ಕರಡಿಗೊಲ್ಲರು', 'ಕಲ್ಲಿಗೊಲ್ಲರು', 'ಕಳ್ಳಿಗೊಲ್ಲರು', 'ಹಟ್ಟಿಗೊಲ್ಲರು' ಎಂಬ ಹೆಸರುಗಳಿಂದ ಕರೆಯುವ ವಾಡಿಕೆ ಇದೆ. ಇವರು ಕೃಷ್ಣನ ವಂಶಸ್ಥರೆಂದು ಗುರುತಿಸಿಕೊಳ್ಳುತ್ತಾರೆ. ಮಹಾಭಾರತದ

ಕೃಷ್ಣ ಇವರ ಮೂಲ ಪುರುಷ ಎಂಬುದು ಗೊಲ್ಲ ಜನಾಂಗದ ನಂಬಿಕೆ ಎಂದು ಪ್ರೊ. ಹಿ. ಚಿ. ಬೋರಲಿಂಗಯ್ಯ ಅವರು ಹೇಳುತ್ತಾರೆ.

ಕಾಡುಗೊಲ್ಲರು ಊರಿನಿಂದ ಹೊರಗೆ ಪ್ರತ್ಯೇಕವಾದ ಹಟ್ಟಿಗಳನ್ನು ಕಟ್ಟಿಕೊಂಡು ವಾಸಮಾಡುವುದರಿಂದ ಅವರನ್ನು ಹಟ್ಟಿಗೊಲ್ಲರೆಂದು ಕರೆಯುವ ವಾಡಿಕೆ ಇದೆ. ಹಟ್ಟಿಗಳ ಸುತ್ತ ಕಳ್ಳಿಗಳನ್ನು ಹಾಕಿರುವುದರಿಂದ ಕಾಡುಗೊಲ್ಲರನ್ನು 'ಕಳ್ಳಿಗೊಲ್ಲ'ರೆಂದು ಕರೆಯುವರು. ಕಾಡುಗೊಲ್ಲರು ತಮ್ಮ ಹಟ್ಟಿಯ ಸುತ್ತ ಹಾಕುವ ಬೇಲಿಗೆ ಕಳ್ಳಿಯನ್ನು ಉಪಯೋಗಿಸಿ ಉಳಿದವರೆಲ್ಲರಿಂದಲೂ ಪ್ರತ್ಯೇಕವಾಗಿರುವುದರಿಂದ ಕಳ್ಳಿ ಹಾಕುವುದು ಅವರ ಸಂಸ್ಕೃತಿಯ ಒಂದು ಮುಖ್ಯವಾದ ಲಕ್ಷಣವಾದುದರಿಂದ ಅವರಿಗೆ ಕಳ್ಳಿ ಗೊಲ್ಲರು ಎಂಬ ಹೆಸರು ಸೂಕ್ತವಾಗುತ್ತದೆ. ಈ ಪದ ಕೆಲವು ಕಡೆಗಳಲ್ಲಿ ಇಂದಿಗೂ ಬಳಕೆಯಲ್ಲಿದೆ. ಕಾಡುಗೊಲ್ಲರ ವೈಶಿಷ್ಟ್ಯವಿರುವುದು ಅವರು ಊರುಗಳಲ್ಲಿ ವಾಸ ಮಾಡದೆ ಕಾಡುಗಳಲ್ಲಿ ವಾಸಮಾಡುವದರಿಂದ ಊರುಗಳ ಮುಖವನ್ನೂ ಕಾಣದೆ ಎಷ್ಟೋ ಜನ ಕಾಡುಗೊಲ್ಲರು ಇಂದಿಗೂ ಇದ್ದಾರೆ. ಅವರ ಸಂಸ್ಕೃತಿ ರೂಪಿತವಾಗಿರುವುದು ಕಾಡುಗಳಿಂದ. ಇದರಿಂದಾಗಿ ಅವರನ್ನು ಕಾಡುಗೊಲ್ಲರು ಎಂಬ ಹೆಸರಿನಿಂದ ಕರೆಯುವುದೇ ಸೂಕ್ತವಾದುದಾಗಿದೆ. ಕಾಡುಗೊಲ್ಲರ ಬಹುಮುಖ್ಯ ಪುರಾಣವಾದ 'ಜುಂಜಪ್ಪನ ಕಥೆ'ಯಲ್ಲಿಯೂ ಕಾಡುಗೊಲ್ಲ ಎಂಬ ಪದದ ಪ್ರಯೋಗ ಇದೆ. ಈ ಎಲ್ಲಾ ಕಾರಣಗಳಿಂದಾಗಿ ಅರ್ಥವತ್ತಾದ ವ್ಯಾಪಕತೆಯುಳ್ಳ ಕಾಡುಗೊಲ್ಲ ಎಂಬ ಪದವನ್ನು ಈ ನಿಬಂಧದ ಉದ್ದಕ್ಕೂ ಬಳಸಲಾಗಿದೆ. ಈ ಕಾಡುಗೊಲ್ಲರಲ್ಲಿ ಚಿತ್ತಮುತ್ತಿ, ಚಂದಮುತ್ತಿ ಮತ್ತು ರಾಮೇಗೌಡನ ಕುಲದವರು ಎಂಬ ಉಪವರ್ಗಗಳು ಕಂಡು ಬರುತ್ತವೆ. ಕರಡಿ, ಕಲ್ಲಿ, ಕಳ್ಳಿ, ಕಹಳೆ, ಕಂಬಿ, ಒನಕೆ, ಪಲ್ಯೆ ಮುಂತಾದ ಪದಗಳು ಅವರ ಕುಲದ ಸಂಕೇತಗಳಾಗಿವೆ. ಮೊದಲು ಪಂಗಡಗಳನ್ನು ನೋಡಿ ಅನಂತರ ಕುಲ ಅಥವಾ ಬೆಡಗುಗಳನ್ನು ಗುರುತಿಸಿಕೊಳ್ಳುತ್ತಾರೆ.

ಕಾಡುಗೊಲ್ಲರು ಸ್ಥಳೀಯವಾಗಿ ತಮ್ಮ ಹಟ್ಟಿಯ ಸುತ್ತಮುತ್ತ ಸಿಗುವಂಥ ಜಾಲಿ, ಬಾರೆ, ಕಾರೆ, ಕಳ್ಳಿ ಮುಂತಾದವುಗಳನ್ನು ಕಡಿದು ಬೇಲಿ ಹಾಕಿಕೊಳ್ಳುತ್ತಾರೆ. ಈ ರೀತಿ ಹಟ್ಟಿಯ ಸುತ್ತ ಬೇಲಿಹಾಕುವಾಗ ಒಂದು ಹತ್ತಿರ ಮಾತ್ರ 'ಹಟ್ಟಿ ಹುದಿ'ಯನ್ನು ಬಿಟ್ಟಿರುತ್ತಾರೆ. ಈ ರೀತಿ ಹಾಕಿಕೊಂಡು ಕಾಡುಗೊಲ್ಲರು ತಮ್ಮನ್ನು 'ಹಟ್ಟಿಗೊಲ್ಲ'ರು ಎಂದು ಗುರುತಿಸಿಕೊಳ್ಳುವ ಹೆಚ್ಚಿನ ವಾಡಿಕೆ ಇದೆ. ಪ್ರಸ್ತುತ ಕಾಡುಗೊಲ್ಲರು ಮತ್ತು ಊರುಗೊಲ್ಲರು ತಮ್ಮನ್ನು 'ಯಾದವರು' ಮತ್ತು 'ಕೃಷ್ಣಗೊಲ್ಲ'ರು ಎಂದು ಕರೆದುಕೊಳ್ಳುತ್ತಾರೆ.

**೨.೩ ವಿಕಾಸದ ಹಾದಿ**

ಎಲ್ಲಾ ಜಾತಿ, ಜನಾಂಗ, ಬುಡಕಟ್ಟುಗಳ ಮೂಲ ಹುಟ್ಟಿನ ಸ್ಥಳದ ಬಗ್ಗೆ ಇರುವ ಐತಿಹ್ಯ ಮತ್ತು ಪುರಾಣಗಳ ಹಾಗೆಯೇ ಈ ಗೊಲ್ಲ ಜನಾಂಗದ ಮಹಿಳೆಯ ಮೂಲ ಉಗಮದ ಬಗ್ಗೆ ಹಲವು ರೀತಿಯ ಪುರಾಣಗಳಿವೆ.

ಈ ಸಮುದಾಯ ದೆಹಲಿ ಪಟ್ಟಣದ ಸುತ್ತಮುತ್ತಲ ಪ್ರದೇಶದಲ್ಲಿ ವಾಸಿಸುವ ಸಂದರ್ಭದಲ್ಲಿ ಕಾಡುಗೊಲ್ಲರ ಸಮುದಾಯದ ಮಹಿಳೆಯರು ತಮ್ಮ ಪಶುಪಾಲನೆಯಿಂದ ಬಂದಂತಹ ಹಾಲು ಮೊಸರು ಮಾರಾಟ ಮಾಡುವ ಸಂದರ್ಭದಲ್ಲಿ ಈ ಮಹಿಳೆಯರ ಮೇಲೆ ಮೊಘಲ್ ದೊರೆ ಅತ್ಯಾಚಾರ ಮಾಡಲು ಪ್ರಯತ್ನಿಸಿದಾಗ ಈ ಸಮುದಾಯದವರಿಗೆ ಹಿಂಸೆಯನ್ನು ನೀಡುವ ಸಂದರ್ಭದಲ್ಲಿ ದಕ್ಷಿಣ ಭಾರತಕ್ಕೆ ವಲಸೆ ಬಂದಂತಹ ಸಮಯದಲ್ಲಿ ಮಹಿಳೆಯೂ ಸಹ ವಲಸೆ ಬಂದಳು.

ಈ ಸಮುದಾಯವು ದಕ್ಷಿಣ ಭಾರತದ ಕೆಲವೊಂದು ಆಯ್ದ ಪ್ರದೇಶಗಳಲ್ಲಿ ನೆಲೆಗೊಂಡರು. ಪ್ರಮುಖವಾಗಿ ಚಿತ್ರದುರ್ಗ, ತುಮಕೂರು, ಬಳ್ಳಾರಿ, ರಾಯಚೂರು, ದಾವಣಗೆರೆ ಜಿಲ್ಲೆಗಳಲ್ಲಿ ವಾಸಿಸಲು ಪ್ರಾರಂಭಿಸಿದರು. ಈ ಕಾಡುಗೊಲ್ಲ ಸಮುದಾಯ ಮತ್ತು ಮಹಿಳೆಯ ಮೂಲದ ಬಗ್ಗೆ ನಾವು ಹುಡುಕ ಹೊರಟರೆ ದ್ವಾಪರ ಯುಗದಲ್ಲಿ ದುಷ್ಟ ಶಿಕ್ಷಣ, ಶಿಷ್ಟ ರಕ್ಷಣೆಗೋಸ್ಕರ ಅವತರಿಸಿದ ಶ್ರೀಕೃಷ್ಣ ಪರಮಾತ್ಮ ಯಾದವ ಸಮುದಾಯವನ್ನು ಉದ್ಧಾರ ಮಾಡಲು ಬಂದಿದ್ದನು ಎಂಬುದನ್ನ ಮಹಾಕಾವ್ಯ ಮತ್ತು ಪುರಾಣಗಳಿಂದ ತಿಳಿಯಬಹುದು.

ಈ ಕಾಡುಗೊಲ್ಲ ಸಮುದಾಯದ ಮೂಲ ಮಹಿಳೆಯಾದ ಯಯಾತಿಯ ಹೆಂಡತಿ 'ದೇವಯಾನಿ'ಯ ಮೂಲಕವೇ ಈ ಸಮುದಾಯ ವಿಕಾಸ ಹೊಂದುತ್ತಾ ಬಂದಿತೆಂಬ ಐತಿಹ್ಯ ಪುರಾಣಗಳು ಲಭ್ಯವಿವೆ. ಕೆಲವೊಂದು

ವಿದ್ವಾಂಸರ ಪ್ರಕಾರ ಯಾದವರು ಮಹಾಭಾರತದ ಯುದ್ಧದಲ್ಲಿ ಮರಣವನ್ನು ಅಪ್ಪಿದಾಗ ಉಳಿದ ಗೋಪಾಲಕರು ತಮ್ಮ ದನಕರುಗಳಿಗೆ ಹುಲ್ಲನ್ನು ಅರಸುತ್ತಾ ಬಂದರೆಂಬ ಪುರಾಣದ ಮೂಲವನ್ನು ಅರಸುತ್ತಾರೆ. ಈ ಸಮುದಾಯ ನಾಗರಿಕ ಪ್ರಪಂಚದಿಂದ ಅಂದರೆ ಪಟ್ಟಣ ಮತ್ತು ಹಳ್ಳಿಗಳ ಜನಸಂಪರ್ಕದಿಂದ ದೂರವಿದ್ದು ಕಂದಾಯದ ದಾಖಲಾತಿ ಪುಸ್ತಕಗಳಲ್ಲಿ ಸೇರ್ಪಡದೆ ಹಟ್ಟಿಗಳನ್ನು ಕಟ್ಟಿಕೊಂಡು ಬಯಲು ಪ್ರದೇಶ, ದಿನ್ನೆ, ಗುಡ್ಡಗಳಿಂದ ಆವೃತವಾದ ಪ್ರದೇಶಗಳಲ್ಲಿ ಈ ಸಮುದಾಯವು ನೆಲೆನಿಂತಿತು.

ಈ ಅಲೆಮಾರಿ ಬುಡಕಟ್ಟಾದ ಕಾಡುಗೊಲ್ಲ ಸಮುದಾಯದ ಮಹಿಳೆಯು ಅತ್ಯಂತ ಹಿಂದುಳಿದ ಬುಡಕಟ್ಟಿಗೆ ಸೇರಿದವಳಾಗಿದ್ದು ಯಾವುದೇ ರೀತಿಯಲ್ಲಿ ಶೈಕ್ಷಣಿಕವಾಗಿ, ಆರ್ಥಿಕವಾಗಿ, ಸಾಮಾಜಿಕವಾಗಿ, ರಾಜಕೀಯವಾಗಿ ಅತ್ಯಂತ ಹಿಂದುಳಿದವಳಾಗಿದ್ದಾಳೆ. ನಂತರ ಈ ಸಮುದಾಯ ಅನೇಕ ರೀತಿಯ ಒಳಪಂಗಡಗಳಾಗಿ ವಿಭಜನೆ ಒಹಂದುತ್ತಾ ಹೋಯಿತು. ಈ ಸಮುದಾಯದಲ್ಲಿ ಸಪಿಂಡ ಅಥವಾ ಸಬೆಡಗಿನಲ್ಲಿಯೇ ವಿವಾಹವಾಗುವ ಪದ್ಧತಿಯಿಲ್ಲ. ಬೇರೆ ಬೆಡಗಿನವರೊಂದಿಗೆ ವೈವಾಹಿಕ ಸಂಬಂಧ ಬೆಳೆಸುವ ಸಂಪ್ರದಾಯವಿದೆ.

ಹಿಂದಿನ ಕಾಲದಲ್ಲಿ ಈ ಸಮುದಾಯ ಕಾಡಿನಲ್ಲಿ ಮರದ ಪೊಟರುಗಳಲ್ಲಿ ವಾಸಿಸುತ್ತಿತ್ತು. ನಂತರ ಕ್ರಮೇಣ ಬರುಬರುತ್ತಾ ಈ ಸಮುದಾಯ ಕಾಡಿನಿಂದ ಹೊರಗೆ ನಗರ, ಪಟ್ಟಣ, ಹಳ್ಳಿಗಳಿಂದ ಸ್ವಲ್ಪ ದೂರದಲ್ಲಿಯೇ ತೆಂಗಿನ ಗರಿ ಇಲ್ಲವೇ ಅಡವಿ ಹುಲ್ಲನ್ನು ಬಳಸಿ ಗುಡಿಸಲುಗಳನ್ನು ಕಟ್ಟಿಕೊಂಡು ವಾಸಮಾಡಲು ಪ್ರಾರಂಭಿಸಿದರು. ಹೀಗೆಯೇ ವಾಸಿಸುತ್ತಿರುವ ಸಂದರ್ಭದಲ್ಲಿ ಇತ್ತೀಚಿಗೆ ಆಧುನಿಕತೆಯ ಗಾಳಿಯ ಸೋಂಕಿನಿಂದ ಕ್ರಮೇಣ ಹೆಂಚಿನ ಮನೆಗಳು, ಮಾಳಿಗೆ ಮನೆಗಳನ್ನು ಕಟ್ಟಿಕೊಂಡು ಅವುಗಳಲ್ಲಿ ವಾಸಮಾಡಿರುವುದನ್ನು ನೋಡಿದರೆ ಈ ಸಮುದಾಯದ ವಿಕಾಸವನ್ನು ತಿಳಿಯಬಹುದಾಗಿದೆ. ಈ ರೀತಿ ವಾಸಿಸುವ ಮನೆಗಳಲ್ಲಿಯೇ ದನದ ಕೊಟ್ಟಿಗೆಗಳನ್ನು ಸಹ ಕಟ್ಟಿಕೊಂಡು ವಾಸಮಾಡುವರು. ಈ ರೀತಿಯಾಗಿ ವಾಸಿಸುವ ಹಟ್ಟಿಗಳಿಗೆ ಈ ಸಮುದಾಯ ತಮ್ಮದೇ ಆದ ಹೆಸರುಗಳನ್ನಿಟ್ಟುಕೊಂಡು ವಾಸಮಾಡುತ್ತಿದ್ದಾರೆ. ಅವುಗಳೆಂದರೆ ಗೌರೀಪುರದ ಹಟ್ಟಿ, ಚನ್ನಮ್ಮನಹಳ್ಳಿ ಹಟ್ಟಿ, ಕಂಬೇರ ಹಟ್ಟಿ, ಜುಂಜಪ್ಪ ಹಟ್ಟಿ, ನಾಗಸಂದ್ರ ಹಟ್ಟಿ ಮೊದಲಾದವು ಮುಖ್ಯವಾಗಿವೆ.

ಪ್ರಾಚೀನ ಕಾಲದಲ್ಲಿ ಈ ಸಮುದಾಯದವರು ಕಾಡಿನಲ್ಲಿ ಪ್ರಾಣಿಗಳನ್ನು ಬೇಟೆಯಾಡಿದರೆ ಮಹಿಳೆ ಅದನ್ನು ರುಚಿಕಟ್ಟಾಗಿ ಬೇಯಿಸಿ ಆಹಾರ ತಯಾರಿಸುತ್ತಿದ್ದಳು. ಜೊತೆಗೆ ಅಡವಿಯಲ್ಲಿ ದೊರೆಯುವ ಗೆಡ್ಡೆ ಗೆಣಸುಗಳನ್ನು, ಸೊಪ್ಪುಗಳನ್ನು ಸಂಗ್ರಹಿಸಿ ಆಹಾರ ಪದ್ಧತಿಯನ್ನು ರೂಢಿಸಿಕೊಂಡಿದ್ದರು. ಪ್ರಸ್ತು ಈ ಸಮುದಾಯದ ಮುಖ್ಯ ಆಹಾರ ಮಾಂಸಹಾರದ ಜೊತೆಗೆ ಸಸ್ಯಾಹಾರವೂ ಅಷ್ಟೇ ಪ್ರಾಮುಖ್ಯತೆ ಪಡೆದುಕೊಂಡಿದೆ. ಇವರ ಮುಖ್ಯ ಆಹಾರ ಧಾನ್ಯ ರಾಗಿಯಾಗಿದೆ. ಇತ್ತೀಚಿನ ಆಧುನಿಕತೆಯ ಪ್ರಭಾವದಿಂದಾಗಿ ಅಕ್ಕಿಯೂ ಇವರ ಆಹಾರ ಪದ್ಧತಿಯಲ್ಲಿ ಸೇರಿದೆ.

ಪ್ರಾಚೀನ ಕಾಲದಲ್ಲಿ ಮಹಿಳೆ ಕಾಡಿನಲ್ಲಿ ವಾಸಿಸುವ ಸಂದರ್ಭದಲ್ಲಿ ಮರದ ತೊಗಟೆಯನ್ನು, ಎಲೆ ಬಳ್ಳಿಗಳನ್ನು ಉಡುಗೆಯಾಗಿ ಬಳಸುತ್ತಿದ್ದಳು. ಆದರೆ ಆಧುನಿಕ ಯುಗದಲ್ಲಿ ಮಹಿಳೆ ಒರಟಾದ ದಪ್ಪವಾದ ಹದಿನಾರು ಮೊಳದುದ್ದ ದಡಿಸೀರೆಯನ್ನು ಉಟ್ಟುಕೊಂಡು ಮಳೆ ಗಾಳಿ ಚಳಿಯಿಂದ ತಮ್ಮ ದೇಹವನ್ನು ರಕ್ಷಿಸಿಕೊಳ್ಳುತ್ತಿದ್ದಳು. ಜೊತೆಗೆ ಈ ಸಮುದಾಯದ ಮಹಿಳೆ ರವಿಕೆ ರಹಿತವಾಗಿರುವುದನ್ನು ಇಂದಿಗೂ ಸಹ ಹಿರಿಯ ಮಹಿಳೆಯರಲ್ಲಿ ಕಾಣಬಹುದು.

ಆದರೆ ಇಂದು ಈಗಿನ ಪೀಳಿಗೆಯ ಯುವತಿಯರು ಎಲ್ಲಾ ಜನಾಂಗದವರಂತೆ ಸಾಮಾನ್ಯವಾಗಿ ಉಡುಗೆಯನ್ನು ತೊಡುತ್ತಿದ್ದಾಳೆ. ಕಾರಣ ಆಧುನೀಕರಣ, ನಗರೀಕರಣ, ಔಪಚಾರಿಕ ಶಿಕ್ಷಣ ಮತ್ತು ಸಾರಿಗೆ ಸಂಪರ್ಕಗಳಿಂದ ಅನುಕರಣೆಯಿಂದಾಗಿ ಈ ಸಮುದಾಯದ ಮಹಿಳೆ ವಿಕಾಸವನ್ನು ಹೊಂದುತ್ತಾ ಬಂದಿದ್ದಾಳೆ. ಹಾಗೂ ತಮ್ಮ ಬಲಕೈಗೆ ಕಡಗವನ್ನು ಸಂಪ್ರದಾಯವಿತ್ತು. ಇದಕ್ಕೆ ಗೊಲ್ಲ ಕಡಗ ಎಂದು ಹೆಸರು. ಇದನ್ನು ತೊಡುವುದಕ್ಕೆ ಕಾರಣ ಅವರದೇ ಆದ ಪ್ರತೀತಿ ಇದೆ. ಆದರೆ ಇತ್ತೀಚಿನ ಈ ಸಮುದಾಯದ ಮಹಿಳೆಯರು ಕಡಗವನ್ನು ದರಿಸದೆ ಇತರ ಸಮುದಾಯದವರ ಪ್ರಭಾವದಿಂದಾಗಿ ನಾಗರಿಕತೆಯಿಂದ ಸಾಮಾನ್ಯವಾದಿ ಆಭರಣಗಳನ್ನು ದರಿಸುತ್ತಿದ್ದಾಳೆ.

ಪ್ರಾಚೀನ ಕಾಲದಿಂದಲೂ ಪುನಃ ಪುನಃ ಬದಲಾವಣೆಗೊಳ್ಳುತ್ತಾ ಆಚರಣೆಯಲ್ಲಿ ಬಂದಿರುವ ವಿಧಾನಗಳೇ ಸಂಪ್ರದಾಯಗಳು. ಇವು ಮಾನವನ ಸಾಮಾಜಿಕ ಜೀವನವನ್ನು ನಿಯಂತ್ರಿಸಿ ಸಾಮಾಜಿಕ ಸಾಮರಸ್ಯವೂ ನೆಲೆಸುವಲ್ಲಿ ಸಹಾಯ ಮಾಡುತ್ತವೆ. ಅದಕ್ಕಾಗಿಯೇ ಸಂಪ್ರದಾಯಗಳನ್ನು ಸಾಮಾಜಿಕ ಜಗತ್ತಿನ ದೊರೆಗಳೆನ್ನುವರು. ಪ್ರತಿಯೊಂದು ಸಮುದಾಯವೂ ತನ್ನದೇ ಆದ ಸಂಪ್ರದಾಯಗಳನ್ನು ಹೊಂದಿರುತ್ತದೆ. ಜನನ ನಾಮಕರಣ, ಜವಳಿ ತೆಗೆಸುವುದು, ಋತುಮತಿ, ಮದುವೆ, ಶವಸಂಸ್ಕಾರ ಮೊದಲಾದವುಗಳಲ್ಲಿ ಪ್ರತಿಯೊಂದು ಸಮುದಾಯವೂ ತನ್ನದೇ ಆದ ವಿದಿವಿಧಾನಗಳನ್ನು ಸಂಪ್ರದಾಯಬದ್ಧವಾಗಿ ನಿರೂಪಿಸುತ್ತದೆ. ಅವು ಸಮುದಾಯ (ಸಾಮಾಜಿಕ) ನಿಯಂತ್ರಣಕ್ಕೆ ಉತ್ತಮ ಮತ್ತು ಪುಷ್ಟಿದಾಯಕ ಅಂಶವಾಗಿ ಆಯಾ ಸಮುದಾಯದ ಸಂಸ್ಕೃತಿಯ ಪರಂಪರೆಯನ್ನು ಮುಂದುವರೆಯುವಂತೆ ಮಾಡುತ್ತವೆ. ಆದರೆ ಈ ಸಂಪ್ರದಾಯಗಳು ಯಾವ ರೀತಿ ಹುಟ್ಟಿಕೊಂಡವು ಹೇಗೆ ಬೆಳೆಯುತ್ತವೆ ಎಂದು ನಿಖರವಾಗಿ ಹೇಳುವುದು ತುಂಬಾ ಕಠಿಣ.

ಮ್ಯಾಕ್‌ಡೂಗಲ್ ಹೇಳುವಂತೆ 'ಎಷ್ಟೋ ಸಂಪ್ರದಾಯಗಳು ಮೂಲ ಧ್ಯೇಯೋದ್ದೇಶಗಳು ಇತಿಹಾಸದ ಗರ್ಭದಲ್ಲಿ ಹುದುಗಿಹೋಗಿವೆ' ಎಂದಿದ್ದಾರೆ. ಇದೇ ರೀತಿ ಷೇಕ್ಸ್‌ಪಿಯರ್ ಈ ಸಂಪ್ರದಾಯಗಳನ್ನು 'ದಬ್ಬಾಳಿಕೆ'ಯೆಂದು ಬೇಕನನು 'ಮಾನವ ಜೀವನದ ನ್ಯಾಯಮೂರ್ತಿ' ಎಂದು ಹೇಳಿದ್ದಾರೆ. ಅದೇ ರೀತಿ ಲುಂಡ್‌ಬರ್ಗ್‌ರವರು 'ಒಂದು ಪೀಳಿಗೆಯಿಂದ ಇನ್ನೊಂದು ಪೀಳಿಗೆಗೆ ವರ್ಗಾಯಿಸಲ್ಪಡುವಷ್ಟರ ಮಟ್ಟಿಗೆ ಸ್ಥಿರತೆಯನ್ನು ಹೊಂದಿದ್ದು ಸಮಾಜದ ಔಪಚಾರಿಕ ಮಾನ್ಯತೆಯನ್ನು ಪಡೆದಿರುವ ಲೋಕ ರೂಢಿಗಳನ್ನೇ ಸಂಪ್ರದಾಯ'ಗಳೆಂದು ಕರೆಯಬಹುದು ಎಂದಿದ್ದಾರೆ.

ಸಾಮಾನ್ಯವಾಗಿ ಸಂಪ್ರದಾಯಗಳ ಮೂಲ ಸ್ವರೂಪ ಸ್ಪಷ್ಟತೆಯಿಲ್ಲದೆ ಕಣ್ಣಿಗೆ ಕಾಣಿಸದ, ಅಜ್ಞಾತವೂ ಆಗಿದ್ದು ಅವು ಪರೋಕ್ಷವಾಗಿ ಬೆಳೆದು ಬಂದಿರುತ್ತವೆ. ಆದರೆ ಇವು ಯಾವುದೇ ಯೋಜನಾಬದ್ಧವಾಗಿ ಸಾಮಾಜಿಕ ಜೀವನದಲ್ಲಿ ಒಡಮೂಡುವುದಿಲ್ಲ. ಜನ ಸಮೂಹದ ಬೇಡಿಕೆಗಳನ್ನು ಆಧರಿಸಿ ಇವು ಬೆಳೆಯುತ್ತವೆ. ಈ ಕಾಡುಗೊಲ್ಲ ಸಮುದಾಯದಲ್ಲಿ ಸಂಪ್ರದಾಯಗಳಿಗೆ ಹೆಚ್ಚು ಪ್ರಾಮುಖ್ಯತೆಯನ್ನು ಕೊಟ್ಟಿದ್ದಾರೆ. ಈ ಸಮುದಾಯ ತಮ್ಮ ದಿನ ನಿತ್ಯದ ಸಾಮಾಜಿಕ ಜೀವನದಲ್ಲಿ ಜನನ, ನಾಮಕರಣ, ಜವಳಿ ತೆಗೆಸುವುದು ಋತುಮತಿಶಾಸ್ತ್ರ, ವಿವಾಹ ಮತ್ತು ಮರಣ ಮೊದಲಾದ ಸಂಪ್ರದಾಯಗಳನ್ನು ಆಚರಿಸುವಲ್ಲಿ ಮಹಿಳೆಯ ಪಾತ್ರದ ಬಗ್ಗೆ ಪ್ರಮುಖವಾಗಿ ಈ ಅಧ್ಯಾಯದಲ್ಲಿ ವಿವರವಾಗಿ ಚರ್ಚಿಸಲಾಗಿದೆ.

### ೩.೧ ಸಂಪ್ರದಾಯ ಮತ್ತು ನಂಬಿಕೆಗಳು

#### ೩.೧.೧ ಜನನ

ಜನನಕ್ಕೆ ಸಂಬಂಧಿಸಿದಂತೆ ಕಾಡುಗೊಲ್ಲ ಸಮುದಾಯದಲ್ಲಿ ಹಲವು ಸಂಪ್ರದಾಯಗಳು, ರೀತಿ-ನೀತಿಗಳು, ಸಾಮಾಜಿಕ ಕಟ್ಟು-ಕಟ್ಟಳೆಗಳು ನಿಯಮಗಳಿವೆ ಬಹುಶಃ ಬೇರೆ ಯಾವ ಜಾತಿಯಲ್ಲಿಯೂ ಇಂತಹ ಕಟ್ಟುನಿಟ್ಟಾಗಿ ಆಚರಿಸುವುದಿಲ್ಲವೆಂದೇ ತೋರುತ್ತದೆ. ಏಕೆಂದರೆ ಈ ಸಮುದಾಯ ಆಚರಿಸುವ ಸಂಪ್ರದಾಯಗಳು ಒಂದೊಂದು ಸಲ ಅಮಾನವೀಯ ರೂಪವನ್ನು ತಾಳುತ್ತವೆ. ಹೆರಿಗೆ ಎನ್ನುವುದು ಒಂದು ಸ್ವಾಭಾವಿಕ ಸಹಜ ಶಾರೀರಿಕ ಕ್ರಿಯೆಯಾಗಿದ್ದರೂ ಸಹ ದರಿದ್ರ ಸಂಪ್ರದಾಯಗಳು ಈ ಕಾಡುಗೊಲ್ಲರಲ್ಲಿ ಕಂಡು ಬರುತ್ತವೆ. ಪುರುಷ ಪ್ರಧಾನ ಕಾಡುಗೊಲ್ಲ ಸಮುದಾಯದಲ್ಲಿ ಹೆತ್ತರೂ, ಸತ್ತರೂ, ಮುಟ್ಟಾದರೂ ಮೈಲಿಗೆಯೆಂದು ಭಾವಿಸುವ ಈ ಜನಾಂಗ ಹಟ್ಟಿಯಿಂದ ಹೊರಗೆ ಸ್ವಾಭಾವಿಕವಾಗಿ ದೊರೆಯುವ ಕಾಮಸಿಯನ್ನೋ, ತೆಂಗಿನ ಗರಿಯನ್ನೋ, ಆಫನ್ನೋ

ಅಥವಾ ಅಡವಿ ಹುಲ್ಲನ್ನು ಬಳಸಿ ಗೋಳಾಕಾರವಾಗಿರುವಂತೆ ಕತ್ತಾಳಿನಾರಿನಿಂದ ಸುತ್ತ ಹಿಂಡಿಕೆಯನ್ನು ಬಿಗಿದು ಹಟ್ಟಿಯಿಂದ ಹೊರಗೆ ಪ್ರತ್ಯೇಕವಾದ 'ಹೆರಿಗೆ ಗುಡ್ಲ'ನ್ನು ನಿರ್ಮಿಸಿರುತ್ತಾರೆ. ಆ ಗುಡಿಸಲ ಒಳಗೆ ತೆವಳಿಕೊಂಡು ಹೋಗಲು ಒಂದು ಚಿಕ್ಕ ದ್ವಾರ ಮಾತ್ರ ಬಿಟ್ಟಿರುತ್ತಾರೆ. ಗುಡಿಸಲೊಳಗೆ ಒಬ್ಬರು ಮಲಗುವಷ್ಟು ಮಾತ್ರ ಸ್ಥಳವಿರುತ್ತದೆ. ಗಾಳಿ, ಬೆಳಕು, ಗುಡಿಸಲು ಒಳಗೆ ಪ್ರವೇಶಿಸದಂತೆ ಬಹಳ ಜನ ಒಳಗೆ ಕುಳಿತುಕೊಳ್ಳದಂತೆ ಗುಡಿಸಲು ನಿರ್ಮಿಸಿರುತ್ತಾರೆ. ಹಾಗೂ ಆ ಹೆರಿಗೆ ಗುಡ್ಲನ್ನು ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಸುಲಭವಾಗಿ ಸಾಗಿಸುವ ರೀತಿಯಲ್ಲಿ ಕಟ್ಟಿರುತ್ತಾರೆ. ಇದರ ಕೆಳಗಡೆ ಭತ್ತದ ಹುಲ್ಲು ಹಾಸಿ, ಅದರ ಮೇಲೆ ಗೋಣಿತೊಟ್ಟುಗಳನ್ನು ಹಾಕಿರುತ್ತಾರೆ. ಗರ್ಭಿಣಿ ಹೆಂಗಸಿಗೆ ಹೆರಿಗೆ ನೋವು ಕಾಣಿಸಿಕೊಂಡ ಕೂಡಲೇ ಹಟ್ಟಿಯಿಂದ ಹೊರಗೆ ನಿರ್ಮಿಸಿದ ಗುಡ್ಲುವಿನಲ್ಲಿ ತಂದು ಬಿಡುತ್ತಾರೆ. ಹೆರಿಗೆ ಗುಡ್ಲು ಇರುವ ಸ್ಥಳದಲ್ಲಿ ಅವಳ ಸಂಬಂಧಿಕರೆನಿಸಿಕೊಂಡವರು ಆ ಮಹಿಳೆಯನ್ನು ಮುಟ್ಟುವುದಿಲ್ಲ. ಅವಳ ಸಹಾಯಕ್ಕೂ ಹೋಗುವಂತಿಲ್ಲ. ಬೇಡ ಜನಾಂಗದ ಸೂಲಗಿತ್ತಿಯು ಬಂದು ಹೆರಿಗೆಯನ್ನು ಮಾಡಿಸುತ್ತಾಳೆ. ಆದರೆ ಹಿಂದಿನ ಕಾಲದಲ್ಲಿ ಸೂಲಗಿತ್ತಿಯೂ ಸಹ ಅವಳ ಸಹಾಯಕ್ಕೆ ಹೋಗುವಂತಿರಲಿಲ್ಲ. ಬರೀ ಬಸುರಿ ಹೆಂಗಸೇ ಹೆರಿಗೆ ಮಾಡಿಕೊಂಡು ತಾನೇ ಕರುಳಬಳ್ಳಿಯನ್ನು ಕತ್ತರಿಸಿಕೊಳ್ಳಬೇಕಾಗಿತ್ತು. ಯಾರೊಬ್ಬರೂ ಅವಳ ನೆರವಿಗೆ ಹೋಗುವಂತಿರಲಿಲ್ಲ. ಆದರೆ ಇತ್ತೀಚಿಗೆ ಸೂಲಗಿತ್ತಿ ಅಥವಾ ಆ ಸಮುದಾಯದ ಹಿರಿಯ ಮಹಿಳೆಯು ಹೆರಿಗೆ ಸಂದರ್ಭದಲ್ಲಿ ಸಹಾಯ ಮಾಡುವರು. ಹೆರಿಗೆಯಾದ ತಕ್ಷಣ ಸೂಲಗಿತ್ತಿ ಹೊಕ್ಕಳ ಬಳ್ಳಿಯನ್ನು ಕತ್ತರಿಸಿ ಬರೆಬಂಗಾರ ಎಂದು ಕಾಯಿಸಿದ ಸೂಜಿ ಅಥವಾ ಹಸಿರು ಗಾಜಿನ ಬಳೆಯಿಂದ ಮಗುವಿಗೆ ಮೂರು ಚುಟಿಕೆ ಹಾಕುತ್ತಾಳೆ. ನಂತರ ಬೇವಿನ ಸೊಪ್ಪು ಬೆರೆಸಿದ ಬಿಸಿನೀರಿನಿಂದ ಬಾಣಂತಿ ಮತ್ತು ಮಗುವಿಗೆ ಸ್ನಾನ ಮಾಡಿಸಿ, ಸೂರ್ಯ ನಮಸ್ಕಾರ ಮಾಡಿಸುತ್ತಾಳೆ. ಹೆರಿಗೆಯಾದ ಗೊಲ್ಲರ ಹಟ್ಟಿಗಳಲ್ಲಿ ತಮ್ಮ ದೇವಸ್ಥಾನದ ಬಾಗಿಲು ಮುಚ್ಚಿರುತ್ತಾರೆ. ಕಾರಣ ತಮ್ಮ ದೇವರಿಗೂ ಸಹ ಅಂಟು ಮುಟ್ಟೊ ಆಗುತ್ತದೆ ಎಂಬ ಭಯ ಮಡಿ ಮೈಲಿಗೆಯ ವಿಚಾರದಲ್ಲಿ ಬ್ರಾಹ್ಮಣರನ್ನು ಮೀರಿಸುವಂತಹ ಸಮುದಾಯವಾಗಿದೆ.

ಮೊಳಕಾಲ್ಮುರು ತಾಲ್ಲೂಕಿನ ಪ್ರದೇಶದಲ್ಲಿ ನಾನು ಕ್ಷೇತ್ರಕಾರ್ಯ ಕೈಗೊಂಡ ಸಂದರ್ಭದಲ್ಲಿ ಹೊಸಹಳ್ಳಿ, ನಾಗಸಮುದ್ರ, ಚಿಕ್ಕೇರಹಳ್ಳಿ ಈ ಗ್ರಾಮದ ಕಾಡುಗೊಲ್ಲರು ಮನೆಯಲ್ಲಿ ಹೆರಿಗೆ ಮಾಡಿಸಿ ಹೊಕ್ಕಳಬಳ್ಳಿ ಕತ್ತರಿಸಿ, ಕಾಯಿಸಿದ ಸೂಜಿಯಿಂದ ಮೂರು ಚುಟುಕಿಯನ್ನು ಹಾಕಿದ ನಂತರ ಮೊರದಲ್ಲಿ ಮಗುವನ್ನು ಬಟ್ಟೆ ಮುಚ್ಚಿಟ್ಟುಕೊಂಡು, ಬಾಣಂತಿಗೆ ಕಂಬಳಿ ಹೊದ್ದಿಸಿ ಹಟ್ಟಿಯ ಹೊರಗೆ ಕಟ್ಟಿದ ಹೆರಿಗೆ ಗುಡ್ಲುಗೆ ತಂದುಬಿಡುತ್ತಾರೆ. ಎಂಬ ವಿಷಯ ತಿಳಿಯಿತು.

ಹೆರಿಗೆಯ ನಂತರ ಸುಮಾರು ಮೂರು ತಿಂಗಳುಗಳ ಕಾಲ ಮಗು ಮತ್ತು ತಾಯಿಯನ್ನು ಹಟ್ಟಿಯಿಂದ ಹೊರಗಿಡುತ್ತಾರೆ. ಅವರನ್ನು ಯಾರೂ ಮುಟ್ಟುವಂತಿತಲ್ಲ. ಅವರಿಬ್ಬರ ನೆರಳೂ ಸಹ ಬೇರೆಯವರ ಮೇಲೆ ಬೀಳುವಂತಿಲ್ಲ ಒಂದು ವೇಳೆ ಬೇರೆಯವರ ಮೇಲೆ ಬಿದ್ದರೆ, ಅವರೂ ಸಹ ಮೈಲಿಗೆಯಾಗುತ್ತಾರೆ. ಆದರೆ ಹೆರಿಗೆಯಾಗಿ ಮೂರು ದಿವಸ, ಏಳು ದಿವಸ, ಹನ್ನೊಂದು ದಿವಸಗಳಲ್ಲಿ ಅಗಸರವಳು ಬಂದು ಸ್ನಾನ ಮಾಡಿಸಿ ಮಡಿ ಬಟ್ಟೆಗಳನ್ನು ಕೊಟ್ಟು, ಗುಬ್ಬವನ್ನು ಅದರ ಮೊದಲಿನ ಜಾಗದಿಂದ ಸ್ವಲ್ಪ ದೂರದಲ್ಲಿ ಸಗಣಿಯನ್ನು ಸಾರಿಸಿರುತ್ತಾಳೆ. ಗುಬ್ಬವನ್ನು ಮೊದಲಿನ ಜಾಗದಿಂದ ಎತ್ತಿ ಸಾರಿಸಿದ ಜಾಗದಲ್ಲಿ ಇಡುತ್ತಾಳೆ. ಬಾಣಂತಿ ತನ್ನ ಮಗುವಿನೊಡನೆ ಗುಬ್ಬದೊಳಗೆ ಬರುತ್ತಾಳೆ. ಹೀಗೆ ಮಡಿವಾಳರು ಬಂದು ಒಂದು ತಿಂಗಳು, ಎರಡು ತಿಂಗಳು , ಮೂರುತಿಂಗಳುವರೆಗೂ ಬಂದು ನೀರು ಹಾಕಿ ಮಡಿಬಟ್ಟೆಗಳನ್ನು ಕೊಟ್ಟು, ಸೂತಕವನ್ನು ಕಳೆಯುತ್ತಾರೆ. ಹೆರಿಗೆಯಾಗಿ ಸೂತಕ ಕಳೆಯುವವರೆಗೂ ಬಾಣಂತಿ ಮತ್ತು ಮಗು ಹಟ್ಟಿಯ ಹೊರಗೆ ಎರಡು ತಿಂಗಳುಗಳತನಕ ಯಾರ ಸಹಾಯವಿಲ್ಲದೆ, ಮಳೆಯೆನ್ನದೆ, ಬಿಸಿಲೆನ್ನದೆ, ಗಾಳಿಯೆನ್ನದೆ ಮೂಕ ಪ್ರಾಣಿಗಳಂತೆ ಕಾಲವನ್ನು ತಳ್ಳಬೇಕು. ಹೆರಿಗೆಯಾದ ಬಾಣಂತಿಗೆ ಆಹಾರವಾಗಿ ಕೆಂಪು ಮೆಣಸಿನಕಾಯಿ ಚಟ್ನಿ, ರಾಗಿ ಮುದ್ದೆ ಇಲ್ಲವೇ ರವೆ ಗಂಜಿಯನ್ನು ಮನೆಯಿಂದ ತಂದು ಬಾಣಂತಿ ಕೈಯಲ್ಲಿ ಎತ್ತಿ ಹಾಕುತ್ತಿದ್ದರು. ಮೊದಲು ಬಾಣಂತಿಗೆ ನೀರು ಕುಡಿಸಲು ತೆಂಗಿನ ಕಾಯಿ ಚಿಪ್ಪನ್ನು ಕೊಡುತ್ತಿದ್ದರು. ಆದರೆ ಇಂದು ಪ್ಲಾಸ್ಟಿಕ್ ಚಂಬನ್ನು ಕೊಡುತ್ತಾರೆ. ಇವರಲ್ಲಿ ಸೂತಕವಾದ ಮಹಿಳೆಗೆ ಸಂಬಂಧಪಟ್ಟ ಹಾಗೆ ಒಂದು ಮಾತು ಹೇಳುವರು ಅದೇನೆಂದರೆ, ಸೂತಕವಾದ ಹೆಣ್ಣಿಗೆ "ಎತ್ತ ಮುದ್ದೆ ಎತ್ತನೀರು" ಎಂಬುದು ಮನೆಮಾತಾಗಿದೆ. ಬಹಳ ಹಿಂದೆ ಹೆರಿಗೆಯಾಗಿ ಸೂತಕ ಕಳೆಯುವವರೆಗೂ

ಬೇಕಾಗುವ ಆಹಾರ ಪದಾರ್ಥಗಳನ್ನು ಮುಂಚಿತವಾಗಿಯೇ ಹೆರಿಗೆಗುಡ್ಲುನಲ್ಲಿ ಇಟ್ಟು ಬಾಣಂತಿಯೇ ಅಡಿಗೆಮಾಡಿಕೊಂಡು ಊಟ ಮಾಡುವ ಪದ್ಧತಿ ಇತ್ತಂತೆ. ಈ ಪದ್ಧತಿ ಇಂದಿಗೂ ಮೊಳಕಾಲ್ಮುರು ತಾಲ್ಲೂಕಿನ ಚಿಕ್ಕೇರಹಳ್ಳಿ ಗೊಲ್ಲರಹಟ್ಟಿಯಲ್ಲಿ ಇದೆ. ಮತ್ತೆ ಕೆಲವೊಂದು ಗೊಲ್ಲರಹಟ್ಟಿಗಳಲ್ಲಿ ಈ ಸಂಪ್ರದಾಯ ಇಲ್ಲ. ಮಗು ಹುಟ್ಟಿ ಮೂರು ಅಥವಾ ಹದಿನಾರು ದಿನದಲ್ಲಿ 'ಕುರುಡಿಕುಕ್ಕಾರ', 'ಕಾರ' ಮತ್ತು 'ನೆಡೆಹಾಲು' ಹಾಕುತ್ತಾರೆ. ಈ ಸಮುದಾಯದವರು ಹುಟ್ಟಿದ ಮಗುವಿಗೆ ಜಾತಕ, ಭವಿಷ್ಯ, ಪಂಚಾಂಗ ಕೇಳುವ ಪದ್ಧತಿ ಹಿಂದೆ ಇರಲಿಲ್ಲ. ಆದರೆ ಇಂದು ವಿದ್ಯಾವಂತ ಜನರು ಮಾತ್ರ ಇವುಗಳನ್ನು ಪಾಲಿಸುತ್ತಾರೆ. ಮಗು ಹುಟ್ಟಿದ ಏಳುದಿನಕ್ಕೆ ವಿಧಿಯಮ್ಮ ಮಗುವಿಗೆ ಹಣೆಬರಹ ಬರೆಯುತ್ತಾಳೆ ಎಂಬ ನಂಬಿಕೆ ಇದೆ. ಶೆಟವಿ ತಾಯಿ ಅಥವಾ ವಿಧಿಯಮ್ಮಳನ್ನು ಮ್ಯಾಸಬೇಡ ಮತ್ತು ಕಾಡುಗೊಲ್ಲರು 'ವಿಧಿಮುಂಡ' ಎಂದು ಕರೆಯುತ್ತಾರೆ.

ಮಗು ಮತ್ತು ಬಾಣಂತಿ ಸೂತಕದ ದಿನಗಳನ್ನು ಕಳೆದು ಹಟ್ಟಿ ಪ್ರವೇಶಿಸುವ ದಿನ ಮಡಿವಾಳರು ಬಂದು ಬಾಣಂತಿ ಮತ್ತು ಮಗುವಿಗೆ ಸ್ನಾನ ಮಾಡಿಸಿ ಮಡಿಬಟ್ಟೆಗಳನ್ನು ತೊಟ್ಟುಕೊಂಡು ಗೋಮಂತ್ರವನ್ನು ಚಿಮುಕಿಸುತ್ತಾರೆ. ಬಾಣಂತಿ ಹೆರಿಗೆ ಗುಡ್ಲುವಿನಲ್ಲಿ ಬಳಸುತ್ತಿದ್ದ ಮಡಿಕೆ, ಕುಡಿಕೆ, ಹಳೆ ಬಟ್ಟೆಗಳನ್ನು ಹಟ್ಟಿಯಿಂದ ದೂರ ಎಸೆಯುವರು. ಕೆಲವು ಪ್ರದೇಶಗಳಲ್ಲಿ ಹೆರಿಗೆ ಗುಡ್ಲನ್ನು ಸುಟ್ಟು ಬರುತ್ತಾರೆ. ಕಾರಣ ಸೂತಕ ಎಂಬುವುದು ಈ ಬೆಂಕಿಯೊಡನೆ ಸುಟ್ಟು ಹೋಗಲಿ ಎಂಬರ್ಥ. ಅಂದು ಸಾಯಂಕಾಲ ಬಾಣಂತಿ ಬರಿಗಾಲಲ್ಲಿ ಕರಿಕಂಬಳಿಯನ್ನು ಹೊದ್ದುಕೊಂಡು ಮೊರದಲ್ಲಿ ಮಗುವನ್ನು ಹಾಕಿಕೊಂಡು ಹಟ್ಟಿಯನ್ನು ಜೆನ್ನಿಗೆ ಹಾಲು ಕುಡಿಯುವುದರ ಮೂಲಕ ಹಟ್ಟಿಯನ್ನು ಪ್ರವೇಶಿಸಿ ಅಂದೇ ದೇವಸ್ಥಾನದ ಪೂಜಾರಿಯಿಂದ ಮಗುವಿಗೆ ನಾಮಕರಣ ಮಾಡಿಸುತ್ತಾರೆ.

ಬಾಣಂತಿ ಸೂತಕವನ್ನು ಕಳೆದುಕೊಂಡು ಹಟ್ಟಿ ಪ್ರವೇಶಿಸುವ ವಿಚಿತ್ರ ಸಂಪ್ರದಾಯವನ್ನು ನಾವು 'ಹೊಸಹಳ್ಳಿ' ಗ್ರಾಮದಲ್ಲಿ ಕಾಣಬಹುದು. ಬಾಣಂತಿ ಮತ್ತು ಮಗು ಹಟ್ಟಿ ಪ್ರವೇಶಿಸುವ ಸಂದರ್ಭದಲ್ಲಿ ಹಟ್ಟಿಯ ಹೊರಗೆ ಬಾಗಿಲಲ್ಲಿ ಬೆರಗು (ಬೆಂಕಿ)ಯನ್ನು ಹಾಕಿ ಹಸುವಿನ ಗೋಮಂತ್ರವನ್ನು ಪ್ರೋಕ್ಷಣೆ ಮಾಡಿ ಹಟ್ಟಿಯ ಒಳಗೆ ಕರೆದುಕೊಳ್ಳುವರು. ಐದು ಸಲ ಆ ಬಾಣಂತಿ ಕುಳಿತುಕೊಂಡ ಏಳಬೇಕು ಹೀಗೆ ಐದು ಸಲ ಬೆಂಕಿಯನ್ನು ಹಾಕಿ ಗೋಮಂತ್ರವನ್ನು ಪ್ರೇಕ್ಷಣೆ ಮಾಡುವರು. ಅನಂತರ ಜಾಡಿಮುಂದೆ ಕರೆದುಕೊಂಡು ಬಂದು ಜೆನಿಗೆ ಬುಡ್ಡಿಯನ್ನು ಮುಟ್ಟಿಸಿ ಹಿಂದಕ್ಕೆ ಸರಿದುಕೊಂಡು ಪೂಜೆಮಾಡಿಸಿಕೊಂಡು ನಂತರ ಮಗುವಿಗೆ ಪೂಜಾರಿಯಿಂದ ನಾಮಕರಣವನ್ನು ಮಾಡಿಸುವರು.

ಇದು ಅವರ ಸಂಪ್ರದಾಯವಾಗಿದ್ದರೂ ಮಹಿಳೆಯನ್ನು ಹೆರಿಗೆಯ ಸಂದರ್ಭದಲ್ಲಿ ಹಟ್ಟಿಯಿಂದ ಹೊರಗಿಡುವುದು ಅಮಾನವೀಯ ಪದ್ಧತಿಯಾಗಿದೆ. ಇಂತಹ ಒಂದು ಅಮಾನವೀಯ ಪದ್ಧತಿಯನ್ನು ತೊಡೆದು ಹಾಕಲು ಇಂದಿನ ಈ ಸಮುದಾಯದ ವಿದ್ಯಾವಂತರಿಂದಲೂ ಸಹ ಸಾಧ್ಯವಾಗಿಲ್ಲ. ಕಾರಣ ತಲೆತಲಾಂತರವಾಗಿ ಬೇರುಬಿಟ್ಟಿರುವ ಹೊರಗಿಡುವ ಪದ್ಧತಿಯನ್ನು ಈ ಸಮುದಾಯದ ಹಿರಿಯರು ಈ ಸಂಪ್ರದಾಯಗಳನ್ನು ಪ್ರೋತ್ಸಾಹಿಸುತ್ತಾ ನಡೆಸಿಕೊಂಡು ಬಂದಿರುವುದರಿಂದ ಇವನ್ನು ಕಿತ್ತೊಗೆಯಲು ಸಾಧ್ಯವಿಲ್ಲದಾಗಿದೆ. ಬಾಣಂತಿ ಮತ್ತು ಮಗುವನ್ನು ಮೂರು ತಿಂಗಳುಗಳ ಕಾಲ ಹಟ್ಟಿ ಹೊರಗಡೆ ಪ್ರತ್ಯೇಕವಾಗಿಡುವುದು ಶುಚಿತ್ವದ ದೃಷ್ಟಿಯಿಂದ ವೈಜ್ಞಾನಿಕವಾಗಿ ಸರಿಯಾಗಿದೆ ಎಂದು ಕೆಲಸದ ಒತ್ತಡದಿಂದ ದೂರವಿದ್ದು, ವಿಶ್ರಾಂತಿ ದೃಷ್ಟಿಯಿಂದಲೂ ಇದು ಸರಿ ಎನಿಸಿದರೂ ಮಗುವಿನ ಆರೈಕೆ, ಆರೋಗ್ಯದ ದೃಷ್ಟಿಯಿಂದ ಮತ್ತು ಮಾನವೀಯ ದೃಷ್ಟಿಯಿಂದ ಮಗು ಮತ್ತು ಬಾಣಂತಿಯನ್ನು ಹಟ್ಟಿಯಿಂದ ಹೊರಗಡೆ ಇಡುವುದು ಸರಿಯಲ್ಲ. ಎಷ್ಟೋ ಸಂದರ್ಭಗಳಲ್ಲಿ ಗುಡುಗು, ಮಳೆ, ಸಿಡಿಲು, ಬಿರುಗಾಲಿಯಿಂದ ಮಗು ಮತ್ತು ಬಾಣಂತಿಯ ಜೀವಕ್ಕೆ ಅಪಾಯವಾಗಿರುವುದು ಕಂಡುಬಂದಿದೆ. ಈ ರೀತಿಯ ಅಪಾಯದಿಂದ ಮಗು ಮತ್ತು ಬಾಣಂತಿಯನ್ನು ಕಾಪಾಡಿಕೊಳ್ಳುವುದಕ್ಕಾಗಿ ಸೂತಕದ ದಿನಗಳನ್ನು ಮೂರುತಿಂಗಳಿಂದ ಎರಡು ತಿಂಗಳುಗಳಿಗೆ ಕೆಲವೊಂದು ಗೊಲ್ಲರ ಹಟ್ಟಿಗಳಲ್ಲಾದರೆ ಮೊಳಕಾಲ್ಮುರುವಿನ ಪಿ.ಟಿ.ಹಟ್ಟಿಯಲ್ಲಿ ಈ ಸಂಪ್ರದಾಯ ಸಂಪೂರ್ಣವಾಗಿ ಇಲ್ಲದಂತಾಗಿದೆ. ಇವರು ಹೆರಿಗೆಯನ್ನು ಇತರೆ ಸಮುದಾಯದವರಂತೆ ಅಂದರೆ ಊರುಗೊಲ್ಲರ ರೀತಿಯಲ್ಲಿಯೇ ಅನುಸರಿಸುವ ಪದ್ಧತಿಯನ್ನು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ನನ್ನ ಗಮನಕ್ಕೆ ಬಂದಿರುವುದು.

ಇತ್ತೀಚಿನ ಜಾಗತಿಕ ಸಂದರ್ಭದಲ್ಲಿ ವಿದ್ಯಾವಂತ ಯುವಕ ಯುವತಿಯರು ಹಾಗೂ ಸರಕಾರಿ ಉದ್ಯೋಗದಲ್ಲಿರುವ ಈ ಕಾಡುಗೊಲ್ಲ ಸಮುದಾಯದವರು ಈ ರೀತಿಯ ಆಚರಣೆಗಳಿಂದ ಆಗುವ ದುಷ್ಪರಿಣಾಮಗಳನ್ನು ಅರಿತುಕೊಂಡು ತಾವೂ ಸಂಪೂರ್ಣವಾಗಿ ಬಿಡುವುದರ ಜೊತೆಯಲ್ಲಿಯೇ ತಮ್ಮ ಸಮುದಾಯದ ಅವಿದ್ಯಾವಂತ ಗಂಡಸರು ಮತ್ತು ಮಹಿಳೆಯರಿಗೆ ಮನವರಿಕೆಯನ್ನು ಮಾಡಿಕೊಡುತ್ತಾ ಬರುತ್ತಿದ್ದಾರೆ. ಹೀಗೆಯೇ ಈ ಸಂಪ್ರದಾಯಗಳ ಆಚರಣೆಗಳನ್ನು ದಿನದಿಂದ ದಿನಕ್ಕೆ ಕಡಿಮೆಯಾಗುತ್ತಾ ಹೋದರೆ ಕೊನೆಗೆ ಇವು ಸಂಪೂರ್ಣವಾಗಿ ನಶಿಸಬಹುದಾಗಿದೆ. ಅದಕ್ಕಾಗಿ ಈ ಸಮುದಾಯದವರಿಗೆ ಶಿಕ್ಷಣವನ್ನು ಕೊಡುವುದರ ಕೊಡಿಸುವುದರ ಮೂಲಕ ಗೊಡ್ಡು ಸಂಪ್ರದಾಯಗಳನ್ನು ನಶಿಸಬಹುದು.

ಇತ್ತೀಚಿನ ಕಾಡುಗೊಲ್ಲ ಸಮುದಾಯದ ಕೆಲವು ವಿದ್ಯಾವಂತರ ನಗರಗಳಲ್ಲಿ ಕೆಲಸಗಳನ್ನು ಮಾಡುತ್ತಾ ಅಲ್ಲಿಯೇ ವಾಸ ಮಾಡುತ್ತಿರುವುದರಿಂದ ಇವರ ಅನಿಷ್ಟ ಪದ್ಧತಿ ಅಥವಾ ಸಂಪ್ರದಾಯಗಳನ್ನು ಸಂಪೂರ್ಣವಾಗಿ ಕೈಬಿಟ್ಟಿರುವುದನ್ನು ನಾವು ಮೊಳಕಾಲ್ಮುರು ಪ್ರದೇಶದ ಗಿರಿಜನ ಹಟ್ಟಿಯಲ್ಲಿ ಕಾಣಬಹುದಾಗಿದೆ.

ಈ ಕಾಡುಗೊಲ್ಲರ ಜನಾಂಗದ ಕಲಿತ ಮತ್ತು ತಿಳುವಳಿಕೆ ಇರುವ ಹೆಣ್ಣುಮಕ್ಕಳು ಮನಃಪೂರ್ವಕವಾಗಿ ಒಪ್ಪದಿದ್ದರೂ ಮೌನವಾಗಿ ಪ್ರತಿಭಟಿಸುತ್ತಿದ್ದಾರೆ. ಶಿಕ್ಷಣ ಹಾಗೂ ಆರ್ಥಿಕ ಸ್ಥಿತಿ ಸುಧಾರಿಸುತ್ತಿರುವ ಹಟ್ಟಿಗಳಲ್ಲಿ ಈ ಪದ್ಧತಿಯು ಕ್ರಮೇಣವಾಗಿ ಸಡಿಲವಾಗುತ್ತಿದೆ. ಆದರೂ ಸಹ ಈ ಪದ್ಧತಿಯನ್ನು ಬೇರು ಸಹಿತ ಕಿತ್ತೆಸೆಯಲು ಹಾಗೂ ಈ ಆಚರಣೆಗಳಿಂದಾಗಬಹುದಾದ ಅನಾಹುತಗಳ ಬಗ್ಗೆ ಈ ಜನಾಂಗದ ಜನರಿಗೆ ವಿಶೇಷವಾಗಿ ಮಹಿಳೆಯರಿಗೆ ಸೂಕ್ತ ತಿಳುವಳಿಕೆ ನೀಡಿ ಅವರಲ್ಲಿ ಅರಿವು ಮೂಡಿಸುವುದು ಮುಖ್ಯವಾಗುತ್ತದೆ. ಇತ್ತೀಚೆಗೆ ಚಿಕ್ಕೇರಹಳ್ಳಿ ಗೊಲ್ಲರಹಟ್ಟಿಯ ಹೊರಗಡೆ ಬಾಣಂತಿಯರು ವಾಸವಿರಲು ಪ್ರಸೂತಿ ಗೃಹವನ್ನು ಕಟ್ಟಲಾಗಿದೆ. ಆದರೆ ಈ ಯೋಜನೆ ಈಗಿರುವ ಕಾಡುಗೊಲ್ಲರ ಗೊಡ್ಡು ಸಂಪ್ರದಾಯವನ್ನು ಹೋಗಲಾಡಿಸುವುದರ ಬದಲು ಹೆರಿಗೆಯಾದರೆ ಹಟ್ಟಿಯ ಹೊರಗೆ ಇರಲೇ ಬೇಕು ಎಂಬ ಗೊಡ್ಡು ಸಂಪ್ರದಾಯವನ್ನು ತೊಡೆದು ಹಾಕುವುದರ ಬದಲಾಗಿ ಈ ಪದ್ಧತಿಯನ್ನು ಜೀವಂತವಾಗಿಸಿಡುತ್ತದೆ ಎಂಬುದಕ್ಕೆ ಇದೊಂದು ಉತ್ತಮ ನಿದರ್ಶನವಾಗಿದೆ.

### ೩.೧.೨ ನಾಮಕರಣ

ಜನನದ ನಂತರ ನಡೆಯುವ ಮುಖ್ಯವಾದ ಸಂಪ್ರದಾಯದಲ್ಲಿ ಒಂದು. ಪ್ರತಿಯೊಂದು ಸಮುದಾಯವೂ ಸಹ ನಾಮಕರಣ ಶಾಸ್ತ್ರವನ್ನು ಅವರವರ ಆರ್ಥಿಕಮಟ್ಟಕ್ಕೆ ತಕ್ಕಂತೆ ತೊಟ್ಟಿಲು ಇಡುವ ಶಾಸ್ತ್ರವನ್ನು ಮಾಡುವರು ಆದರೆ ಈ ಕಾಡುಗೊಲ್ಲರಲ್ಲಿ ತೊಟ್ಟಿಲುಕಟ್ಟಿ ಮಗುವಿನ ನಾಮಕರಣ ಮಾಡುವ ಪದ್ಧತಿ ಕಂಡುಬರುವುದಿಲ್ಲ. ಈ ಸಮುದಾಯದವರು ಹಟ್ಟಿಯಿಂದ ಹೊರಗೆ ಕಟ್ಟಿದ "ಹೆರಿಗೆಗುಡ್ಲು"ವಿನಲ್ಲಿ ಒಂದು ತಿಂಗಳು, ಎರಡು ತಿಂಗಳು ಮತ್ತೆ ಕೆಲವು ಗೊಲ್ಲರಹಟ್ಟಿಗಳಲ್ಲಿ ಹೆರಿಗೆಯಾಗಿ ಮೂರು ತಿಂಗಳುಗಳ ಕಾಲ ವಾಸಿಸಿ ನಂತರ ಮಗುವಿಗೆ ನಾಮಕರಣ ಮಾಡುವ ದಿನ "ಬಾಣಂತಿ ಸೂತಕವನ್ನು ಕಳೆದುಕೊಂಡು ತನ್ನ ಮಗುವಿನೊಡನೆ ದೇವರ ವಾರದ ದಿನ ಹಟ್ಟಿಯ ಮೂಡಲ ಹುದಿಗೆ ಬರುತ್ತಾಳೆ. ಮಗುವಿನ ತಂದೆ ಜೆನ್ನಿಗೆ ಕುರಿಯ ಹಾಲನ್ನು ತಂದಿರುತ್ತಾನೆ. ಬಾಣಂತಿ ಮತ್ತು ಮಗು ಇಬ್ಬರೂ ಮೂಡಲಿ ಹುದಿಯ ಬಳಿಗೆ ಬಂದಾಗ ಪೂಜಾರಿ ಅವರಿಬ್ಬರಿಗೂ ಜೆನ್ನಿಗೆಯ ಹಾಲನ್ನು ಕುಡಿಸುತ್ತಾರೆ. ಇಲ್ಲಿ ಜೆನ್ನಿಗೆ ಹಾಲು ಕುಡಿಸುವುದನ್ನು 'ಹೊರ ಜೆನ್ನಿಗೆ' ಎಂದು ಕರೆಯುತ್ತಾರೆ. ಅನಂತರ ಮಗುವನ್ನು ಕರೆದುಕೊಂಡು ಬಾಣಂತಿ ಹಟ್ಟಿಯೊಳಗಿನ ದೇವಸ್ಥಾನದ ಸುತ್ತ ಹಾಕಿದ ಬೇಲಿಯ ಬಾಗಿಲಿನ ಬಳಿಗೆ ಬಂದಾಗ ಪೂಜಾರಿ ಅವಳಿಗೆ ಮತ್ತು ಮಗುವಿಗೆ ಜೆನ್ನಿಗೆ ಹಾಲನ್ನು ಕುಡಿಸುತ್ತಾನೆ. ಇದನ್ನು 'ಕಿರುಜೆನ್ನಿಗೆ' ಎಂದು ಕರೆಯುತ್ತಾರೆ. ದೇವಸ್ಥಾನದ ಒಳಗೆ ಬಂದಾಗ ಮಗುವಿಗೆ ಮತ್ತು ಬಾಣಂತಿಗೆ ಪೂಜಾರಿ, ಜೆನ್ನಿಗೆ ಹಾಲನ್ನು ಕುಡಿಸುತ್ತಾನೆ. ಇದನ್ನು 'ಒಳಜೆನ್ನಿಗೆ' ಎಂದು ಕರೆಯುತ್ತಾರೆ. ಬಾಣಂತಿ ಮತ್ತು ಮಗು ಒಳಜೆನ್ನಿಗೆಯನ್ನು ಕುಡಿದನಂತರ ಮಗುವಿನ ತಂದೆ ಏಳುಕಟ್ಟು ವೀಳೆಯದೆಲೆ, ಏಳು ಸೇರು ಅಡಿಕೆ ಎರಡನ್ನೂ ಪೂಜಾರಿಗೆ ಕೊಡುತ್ತಾನೆ. ಈ ಸಂದರ್ಭದಲ್ಲಿ ಪೂಜಾರಿ ಮಗುವಿಗೆ ಹೆಸರಿಡುತ್ತಾನೆ. ಬಾಣಂತಿ ಏಳುಹಣವನ್ನು ದೇವರಿಗೆ ಕಟ್ಟುತ್ತಾಳೆ. ಪೂಜಾರಿ ದೇವರಿಗೆ ಪೂಜೆ ಮಾಡಿ ಎಲ್ಲರಿಗೂ ವೀಳೆಯದೆಲೆ ಅಡಿಕೆಯನ್ನು ಹಂಚುತ್ತಾನೆ. ಅನಂತರ ಮಗು ಬಾಣಂತಿಯನ್ನು ಕರೆದುಕೊಂಡು ಮಗುವಿನ ತಂದೆ ತನ್ನ ಮನೆಗೆ ಹೋಗುತ್ತಾನೆ."

ಸಾಮಾನ್ಯವಾಗಿ ಪ್ರತಿಯೊಂದು ಗೊಲ್ಲರ ಹಟ್ಟಿಗಳಲ್ಲಿಯೂ ದೇವಸ್ಥಾನಗಳಿರುವುದು ತುಂಬಾ ಕಡಿಮೆ. ದೇವಸ್ಥಾನಗಳಿರುವಲ್ಲಿ ಪೂಜಾರಿ ಜೆನ್ನಿಗೆ ಹಾಲನ್ನು ಕುಡಿಸಿ ನಾಮಕರಣ ಮಾಡಿದರೆ ದೇವಸ್ಥಾನಗಳಿಲ್ಲದೆ ಹಟ್ಟಿಗಳಲ್ಲಿ ಕುರಿಹಟ್ಟಿಯ ಹತ್ತಿರ ಕುಂಭಕಳಸ ಅಥವಾ ತಮ್ಮ ಸಾಂಸ್ಕೃತಿಕವೀರನಾದ ಜುಂಜಪ್ಪ ಬಳಸುತ್ತಿದ್ದ ಗಣೆಯನ್ನು ಅಂದರೆ ದೇವರಗಣೆ ಇಟ್ಟು ಪೂಜೆ ಮಾಡಿಸಿ ಅವರವರ ಕುಲಪದ್ಧತಿಗಳಿಗನುಗುಣವಾಗಿ ಪಟ್ಟದ ಪೂಜಾರಿಯನ್ನು ಕರೆಸುತ್ತಾರೆ. ಅವರು ಮಡಿಯಿಂದ ಬಂದು ಕಂಬಳಿಕೊಪ್ಪೆ ಹಾಕಿಕೊಂಡು ಬಾಯಿಯ ಮೂಲಕ ಉಸಿರಾಡುವಾಗ ಅಥವಾ ಮಾತನಾಡುವಾಗ ಎಂಜಲು ಬಿದ್ದು ಅಪವಿತ್ರವಾಗುತ್ತದೆ ಎಂದು ಬಾಯಿಗೆ ಬಟ್ಟೆಕಟ್ಟಿಕೊಂಡು ಜೆನ್ನಿಗೆ ಹಾಲು ಕರೆದು ತಂದು ಹೆತ್ತ ತಾಯಿಯ ಸೂತಕ ಕಳೆಯುವಲ್ಲಿ ಉಪಯೋಗಿಸುವುದರಿಂದ ಇದನ್ನು ಕಾಡುಗೊಲ್ಲರು ಪವಿತ್ರತೀರ್ಥ ಎಂದುಕೊಳ್ಳುವರು.

ಪೂಜಾರಿ ಜೆನ್ನಿಗೆ ಹಾಲನ್ನು ಬಾಣಂತಿ ಮತ್ತು ಮಗುವಿಗೆ 'ಹೊರ ಜೆನ್ನಿಗೆ' 'ಕಿರುಜೆನ್ನಿಗೆ', ಮತ್ತು 'ಒಳಜೆನ್ನಿಗೆ' ಎಂಬ ಜೆನ್ನಿಗೆಯ ಹಾಲನ್ನು ಮೂರು ಸಲ ಕುಡಿದ ನಂತರ ಪೂಜಾರಿ ಪೂಜೆ ಮಾಡಿ ತಾಯಿ ಮತ್ತು ಮಗುವಿಗೆ ತೀರ್ಥ ಹಾಕಿ, ಧೂಳತ ಹಚ್ಚಿದ ಮೇಲೆ ಮನೆಗೆ ಹೊರಟುಹೋಗಿ ತೊಟ್ಟಿಲು ಕಟ್ಟಿ ನಾಮಕರಣವನ್ನು ಮಾಡುವರು. ನಾಮಕರಣ ಮಾಡುವಾಗ ಇವರು ತಮ್ಮ ಕುಲದೈವದ ಹೆಸರನ್ನೇ ಇಡುವ ವಾಡಿಕೆಯಿದೆ. ನನ್ನ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಪ್ರಮುಖವಾಗಿ ಹೊಸಹಳ್ಳಿ, ನಾಗಸಮುದ್ರ, ವೆಂಕಟಾಪುರ, ಹೊಸಕೋಟೆ, ಚಿಕ್ಕೇರಹಳ್ಳಿ ಗ್ರಾಮಗಳಲ್ಲಿ ಈ ಹೆಸರುಗಳು ಪ್ರಧಾನವಾಗಿ ಕಂಡುಬಂದವು. ಚಿತ್ತಮ್ಮ, ಕರಿಯಮ್ಮ, ಬೊಮ್ಮಕ್ಕ, ಈರಮ್ಮ, ಜಂಪಕ್ಕ, ಗಂಗಮ್ಮ, ಯಶೋಧ, ಗಿರಿಯಮ್ಮ, ಓಬಳಮ್ಮ ಮುಂತಾದವು ಕಂಡುಬಂದವು.

ಕಾಡುಗೊಲ್ಲರ ಸಮುದಾಯಕ್ಕೆ ವಿರುದ್ಧ ಎಂಬಂತೆ ಇದೇ ಸಮುದಾಯದ ಅಕ್ಷರ ಕಲಿತ ಮತ್ತು ನಗರವಾದ ಮೊಳಕಾಲ್ಮುರುವಿನಲ್ಲಿ ಬರುವ ಗಿರಿಜನಹಟ್ಟಿ ಮತ್ತು ಪುಡಗೋಸಿ ತಿಮ್ಮಯ್ಯನ ಹಟ್ಟಿಯಲ್ಲಿ ಈ ರೀತಿಯಾಗಿ ಆಚರಿಸಿದೆ. ಅವರು ನೇರವಾಗಿ ಇತರೆ ಸಮುದಾಯದವರು ತೊಟ್ಟಿಲು ಕಟ್ಟಿ ಸೋದರತ್ತೆಯ ಮೂಲಕ ಪೂಜೆ ಮಾಡಿಸಿ ಸೋದರಮಾವನಿಂದ ನಾಮಕರಣಮಾಡುವ ಸಂಪ್ರದಾಯವನ್ನು ಇಟ್ಟುಕೊಂಡಿದ್ದಾರೆ. ಇವರು ಕುರಿಹಟ್ಟಿಗೆ ಹೋಗದೆ, ಜುಂಜಪ್ಪನಗಣೆ, ಕುಂಭ ಕಳಸಗಳನ್ನು ಲೆಕ್ಕಿಸದೆ ಸಂಪೂರ್ಣವಾಗಿ ಸಂಪ್ರದಾಯಗಳನ್ನು ಮೂಲೆಗೊತ್ತಿ ನಾಮಕರಣವನ್ನು ಮಾಡುವರು. ನಾಮಕರಣ ಮಾಡುವ ಸಂದರ್ಭದಲ್ಲಿ ಮಗುವಿನ ತಂದೆ, ತಾಯಿಗೆ ಮತ್ತು ಮಗುವಿಗೆ ತವರು ಮನೆಯವರು ಹೊಸಬಟ್ಟೆಗಳನ್ನು ತಂದು ಇತರೆ ಮುಂದುವರಿದ ಸಮುದಾಯದವರಂತೆ ತಮ್ಮ ಆರ್ಥಿಕತೆಯ ಸ್ಥಿತಿಗೆ ಅನುಗುಣವಾಗಿ ಬಂಧು ಬಳಗವನ್ನು ಕರೆದು ನಾಮಕರಣವನ್ನು ಮಾಡುವರು. ಇಲ್ಲಿ ಮಗುವಿನ ತಾಯಿಗೆ ಉಡಿಅಕ್ಕಿಯನ್ನು ಹಾಕಿ ತವರಿಗೆ ಕರೆದುಕೊಂಡು ಹೋಗುವುದು ವಿಶೇಷವಾಗಿದೆ.

### ೩.೧.೩ ಋತುಮತಿ

ಹೆಣ್ಣು ಋತುಮತಿಯಾಗುವುದು ಪ್ರಕೃತಿಯ ನಿಯಮ. ಅವಳು ಯೌವನಾವಸ್ಥೆಗೆ ಕಾಲಿರಿಸುವ ಪೂರ್ವದಲ್ಲಿಯೇ ಋತುಮತಿಯಾಗುವಳು. ಕಾಡುಗೊಲ್ಲರಲ್ಲಿ ಹೆಣ್ಣು ಋತುಮತಿಯಾಗುವುದನ್ನು ದೊಡ್ಡವಳಾಗುವುದು, ಮೈನೆರೆಯುವುದು, ವಯಸ್ಸಿಗೆ ಬರುವುದು, ಕೈಗೆ ಬಂದಿದ್ದಾಳೆ ಎಂದು ಕರೆಯುತ್ತಾರೆ. ಇತರೆ ಜಾತಿ ಜನಾಂಗದವರಲ್ಲಿ ಸಾಮಾನ್ಯವಾಗಿ ಹೆಣ್ಣು ೧೨ರಿಂದ ೧೩ವರ್ಷದ ವಯಸ್ಸಿನಲ್ಲಿ ಋತುಮತಿಯಾಗುತ್ತಾಳೆ. ಈ ರೀತಿ ಋತುಮತಿ ಆಗುವುದನ್ನು ಈ ಸಮುದಾಯದಲ್ಲಿ ಮೈಲಿಗೆ, ಸೂತಕ, ಅಪವಿತ್ರ ಎಂದು ಭಾವಿಸುವರು.

ಈ ಸಮುದಾಯದಲ್ಲಿ ಮಹಿಳೆಯ ಮೈನೆರೆದಾಗ ದೇವರು ಹಟ್ಟಿ ಮತ್ತು ಮನೆಗಳಿಗೆ ಸೂತಕ ತಾಗುವುದು ಎಂಬ ನಂಬಿಕೆಯಿಂದ ಹೆಣ್ಣು ಋತುಮತಿಯಾಗಿದ್ದಾಳೆ ಎಂಬುದು ಗೊತ್ತಾದ ತಕ್ಷಣ ಅವಳ ಸೋದರ ಮಾವನಿಗೆ ಮೊದಲು ಸುದ್ದಿಯನ್ನು ಮುಟ್ಟಿಸುವರು. ಇವರು ಬಂದು ಋತುಮತಿಯಾದ ಹೆಣ್ಣಿಗೆ ಹಸಿರು ಗುಡ್ಲನ್ನು ಕಟ್ಟಿ ಕೊಡುವ ಸಂಪ್ರದಾಯವಿದೆ.

ಹೆಣ್ಣು ಮಗಳು ಮೈನೆರೆದಿದ್ದು ಗೊತ್ತಾದ ತಕ್ಷಣವೇ ಕಾಡುಗೊಲ್ಲರು ಹಟ್ಟಿಯಿಂದ ಹೊರಗೆ ಮುತ್ತೈದೆಯರೆಲ್ಲರೂ ಬಂದು ಬಿಡುತ್ತಾರೆ. ಆ ದಿನವೇ ಮೈನೆರೆತ ಹೆಣ್ಣಿಗೆ ಮನೆಗೊಂದು ಚಂಬು ಕುಲದ ನೀರು

ಎಂಬ ಸಂಪ್ರದಾಯದಂತೆ ಹಟ್ಟಿಯ ಜನರೆಲ್ಲರೂ ತಂದು ಹಾಕಿದ ನೀರಿನಲ್ಲಿ ಜಳಕ ಮಾಡಿಸಿ ಅಗಸರವಳು ತಂದು ಕೊಟ್ಟ ಮಡಿ ಬಟ್ಟೆಗಳನ್ನು ಉಡಲು ಕೊಡುವರು. ಈ ರೀತಿಯ ಕಟ್ಟುನಿಟ್ಟಾದ ಸಂಪ್ರದಾಯದ ಆಚರಣೆಯನ್ನು ನಾವು ಇಂದಿಗೂ ಮೊಳಕಾಲ್ಮೂರು ತಾಲ್ಲೂಕಿನ ಪ್ರದೇಶದಲ್ಲಿ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ವೆಂಕಟಾಪುರ, ಚಿಕ್ಕೇರಹಳ್ಳಿ, ಹೊಸಹಳ್ಳಿ ಗ್ರಾಮಗಳಲ್ಲಿ ಇನ್ನೂ ಜೀವಂತವಾಗಿದೆ. ನಂತರ ಹುಡುಗಿಯ ಸೋದರ ಮಾವ ಅಥವಾ ಅವನ ಮಕ್ಕಳು ಸ್ಥಳೀಯವಾಗಿ ದೊರೆಯುವ 'ಆಲ', 'ಹತ್ತಿ' ಮತ್ತು 'ಹೊಂಗೆ' ಸೊಪ್ಪುಗಳಿಂದ ಕೆಲವು ಹಟ್ಟಿಗಳಲ್ಲಿ ಇನ್ನು ಕೆಲವು ಹಟ್ಟಿಗಳಲ್ಲಿ 'ಬೇವು', 'ಹೊಂಗೆ' ಮತ್ತು 'ಲಕ್ಕಲಿಗಿಡ'ದ ಸೊಪ್ಪಿನಿಂದ "ಹಸಿರು ಗುಡ್ಲ"ನ್ನು ಹಟ್ಟಿಯ ಹೊರಗೆ ನಿರ್ಮಿಸಿರುತ್ತಾರೆ. ಈ ಹಸಿರು ಗುಡ್ಲುವಿಗೆ ಹಟ್ಟಿಯ ಹಿರಿಯ ಮುತ್ತೈದೆಯರು ಹಾಡುಗಳನ್ನು ಹಾಡುವ ಮೂಲಕ ತಂದು ಬಿಟ್ಟು ಹೋಗುವರು. ಪ್ರತಿದಿನ ಸಾಯಂಕಾಲ ೯ ದಿನಗಳವರೆವಿಗೂ ತಮ್ಮ ಸಮುದಾಯದ ಹಾಡುಗಳನ್ನು ಹಾಡುವ ಸಂಪ್ರದಾಯವಿದೆ. ಈ ಋತುಮತಿಯಾದ ಹುಡುಗಿಯ ಬೇಸರವನ್ನು ಕಳೆಯುವ ದೃಷ್ಟಿಯಿಂದಲೂ ಮತ್ತು ರಕ್ಷಣೆಯ ದೃಷ್ಟಿಯಿಂದ ಅವಳ ತಾಯಿ ಇಲ್ಲವೇ ಹಟ್ಟಿಯ ಹಿರಿಯ ಹೆಂಗಸರು ಹಗಲಿರುಳು ಕಾಯುತ್ತಿರುತ್ತಾರೆ. ಮೈನೆರೆದ ಹೆಣ್ಣು ಮಗಳು ಕೆಲವೊಂದು ಹಟ್ಟಿಗಳಲ್ಲಿ ಬಿಸಿಲು, ಮಳೆ, ಗಾಳಿಯೆನ್ನದೆ ಬಟ್ಟಂಬಯಲಿನಲ್ಲಿಯೇ ಇಲ್ಲವೇ ಮರದ ಕೆಳಗೆ ಅನಾಥರಂತೆಯೇ ಕಾಲವನ್ನು ಕಳೆಯಬೇಕಾಗುತ್ತದೆ.

ಋತುಮತಿಯಾದ ಹುಡುಗಿಗೆ ಈ ಪ್ರದೇಶದಲ್ಲಿ ಹೆಚ್ಚೆಂದರೆ ಒಂಬತ್ತು ದಿನಗಳ ಕಾಲ ಸೊಪ್ಪಿನ ಹಸಿರು ಗುಡಿಸಲಿನಲ್ಲಿ ವಾಸಿಸಲು ಬಿಡುವರು. ಒಂದು ವೇಳೆ ಅವರಿಗೆ ಅನುಮಾನವೇನಾದರೂ ಕಂಡುಬಂದರೆ ಮೊದಲಿದ್ದ ಜಾಗವನ್ನು ಬದಲಿಸುವ ಪರಿಪಾಠವಿದೆ. ಪ್ರತಿದಿನ ಗೊಲ್ಲರ ಹೆಣ್ಣುಮಕ್ಕಳು ನೀರನ್ನು ಹಾಕುತ್ತಾರೆ. ಮಡಿವಾಳರು ಮಡಿಮಾಡಿ ತಂದು ಕೊಟ್ಟ ಬಟ್ಟೆಗಳನ್ನು ಉಡುವಳು. ಮೈಲಿಗೆ ಬಟ್ಟೆಯನ್ನು ತೆಗೆದುಕೊಂಡು ಹೋಗಿ ಪುನಃ ಶುಭ್ರ ಮಾಡಿ ತಂದುಕೊಡುವರು ಆದರೆ ಮೊಳಕಾಲ್ಮುರುವಿನಲ್ಲಿ ಗಿರಿಜನ ಹಟ್ಟಿಯಲ್ಲಿ ಮತ್ತು ಪಿ.ಟಿ. ಹಟ್ಟಿಯಲ್ಲಿ ಈ ರೀತಿಯ ಹಸಿರು ಗುಡಿಸಲು ಸಂಪ್ರದಾಯ ಸಂಪೂರ್ಣವಾಗಿ ನಾಶ ಹೊಂದಿದೆ. ಇದಕ್ಕೆ ಬದಲಾಗಿ ಅವರು ಮನೆಯ ಹೊರಗಡೆಯೇ ಋತುಮತಿಯಾದ ಹೆಣ್ಣನ್ನು ಮೂರು ದಿನಗಳವರೆಗೆ ಬಿಟ್ಟು ಪುನಃ ನಾಲ್ಕನೆಯ ದಿನದಲ್ಲಿ ಮನೆಯ ಒಳಗೆ ಕರೆದುಕೊಂಡು ೯ನೆಯ ದಿನದಲ್ಲಿ ವಿಧ ವಿಧವಾದ ವೇಷ ಹಾಕಿ ಕೂರಿಸಿ ಆ ದಿನ ಬಂಧು ಬಳಗಕ್ಕೆಲ್ಲಾ ಸಿಹಿಯ ಊಟವನ್ನು ಹಾಕುವ ಪರಿಪಾಠವಿದೆ.

ಒಂಬತ್ತನೆಯ ದಿನದಲ್ಲಿ ಸೂತಕ ಕಳೆಯುವಾಗ ಮಡಿವಾಳರು ಬಂದು ಮೈನೆರೆತ ಹುಡುಗಿಯನ್ನು ಪೂರ್ವ ದಿಕ್ಕಿಗೆ ಕುಳ್ಳಿರಿಸಿ ನೀರು ಹಾಕಿ ಮಡಿ ಬಟ್ಟೆಗಳನ್ನು ಉಡಲು ಕೊಡುತ್ತಾರೆ. ಅದೇ ದಿನ ಸಾಯಂಕಾಲ ಹಣ್ಣು, ಹಂಪಲು, ಕಾಯಿಯನ್ನು ಅವಳ ಉಡಿಗೆ ಹಾಕಿ ಅಗಸರವಳಿಂದ ಗೋಮಂತ್ರವನ್ನು ಚಿಮುಕಿಸಿಕೊಂಡು ಮನೆಗೆ ಕರೆದುಕೊಂಡು ಹೋಗಿ ಕೂಡ್ರಿಸುವ ಶಾಸ್ತ್ರವನ್ನು ಮಾಡುತ್ತಾರೆ. ಅಂದು ಸೋದರಮಾವ ಇಲ್ಲವೇ ಅವನ ಮಕ್ಕಳು ತಂದ ಹೊಸ ಬಟ್ಟೆಗಳನ್ನು ಉಡಲು ಕೊಡುವರು. ಅದೇ ದಿನವೇ ಅವಳು ವಾಸ ಮಾಡಲು ಕಟ್ಟಿದ್ದ ಹಸಿರು ಗುಡ್ಲುವನ್ನು ಮತ್ತು ಅವಳು ಬಳಸುತ್ತಿದ್ದ ವಸ್ತುಗಳನ್ನು ಹಟ್ಟಿಯಿಂದ ಹೊರಗೆ ದೂರ ತೆಗೆದುಕೊಂಡು ಹೋಗಿ ಸುಡುವರು. ಈ ರೀತಿ ಸುಡುವುದು ಹಟ್ಟಿಗೆ ಮತ್ತು ಋತುಮತಿಯಾದ ಹೆಣ್ಣಿಗೆ ಅಂಟಿಕೊಂಡಿದ್ದ ಸೂತಕ ಬೆಂಕಿಯಲ್ಲಿ ಸುಟ್ಟು ಹೋದಂತೆ ಆಗುತ್ತದೆ. ಅಂದರೆ ಇಲ್ಲ ಸೂತಕದಿಂದಿರುವ ಹೆಣ್ಣು ಹಟ್ಟಿಯನ್ನು ಹೊಕ್ಕರೆ ಅದರಿಂದ ಹಟ್ಟಿಗೆ ಹಟ್ಟಿಯೇ ದಾರಿದ್ರ್ಯದಿಂದ ತುಂಬಿಕೊಳ್ಳುತ್ತದೆ ಎಂಬುದು ಇವರ ಬಲವಾದ ನಂಬಿಕೆಯಾಗಿದೆ.

ಮೈನೆರೆಯುವುದು ಒಂದು ಪ್ರಕೃತಿಯ ನಿಯಮವಾಗಿದ್ದರೂ ಕಾಡುಗೊಲ್ಲ ಜನಾಂಗದ ಹೆಣ್ಣು ಮಕ್ಕಳಿಗೆ ಶಿಕ್ಷಣದ ದೃಷ್ಟಿಯಿಂದ ಇದು ಒಂದು ಶಾಪವಾಗಿ ಪರಿಣಮಿಸಿದೆ. ಏಕೆಂದರೆ ಮೈನೆರೆದ ಹೆಣ್ಣು ಮಕ್ಕಳು ಶಾಲೆಯಲ್ಲಿ ಕಲಿಯುತ್ತಿದ್ದರೆ ಮೈನೆರೆದಂದಿನಿಂದಲೇ ಶಾಲೆಯನ್ನು ಮಧ್ಯಕ್ಕೆ ಬಿಡಿಸುವರು. ಹೀಗಾಗಿಯೇ ಈ ಸಮುದಾಯದ ಹೆಣ್ಣು ಮಕ್ಕಳು ಕಾಲೇಜು ವಿದ್ಯಾಭ್ಯಾಸವನ್ನು ನೋಡಿಲ್ಲ ಮೈನೆರೆದ ತಕ್ಷಣ ಮನೆಯವರು ಎಷ್ಟೇ ಶ್ರೀಮಂತರಿರಲಿ ಮನೆಯ ಅಕ್ಕಪಕ್ಕದಲ್ಲಿಯೇ ಕಾಲೇಜು ಇದ್ದರೂ ಸಹ ಶಿಕ್ಷಣವನ್ನು ಮುಂದುವರೆಸಲು ಬಿಡುವುದಿಲ್ಲ ಇದು ಇಂದಿನ ಮೊಳಕಾಲ್ಮುರು ತಾಲ್ಲೂಕಿನ ಗ್ರಾಮೀಣ ಪ್ರದೇಶಗಳಲ್ಲಿ ಶಾಲೆಯನ್ನು ಅತ್ಯಧಿಕ ಸಂಖ್ಯೆಯಲ್ಲಿ ಬಿಡುತ್ತಿದ್ದಾರೆ. ಇದಕ್ಕೆ ಪ್ರಮುಖ ಕಾರಣವೆಂದರೆ, ಈ ಸಮುದಾಯ ಅನುಸರಿಸಿಕೊಂಡು ಬಂದಿರುವ ಮೈಲಿಗೆ, ಸೂತಕ, ಅಪವಿತ್ರ ಎಂಬ ಅಜ್ಞಾನದ ತಿಳುವಳಿಕೆಯಾಗಿದೆ.

ಇಂದಿನ ಜಾಗತಿಕ ಸಂದರ್ಭದಲ್ಲಿ ವಿದ್ಯಾವಂತ ನಗರವಾಸಿ ಉದ್ಯೋಗದಲ್ಲಿರುವಂತಹವರು, ಮೈನೆರೆಯುವುದು ಒಂದು ಸೂತಕ ಎಂದು ಭಾವಿಸದೆ, ತಮ್ಮ ಹೆಣ್ಣು ಮಕ್ಕಳನ್ನು ಶಾಲಾಕಾಲೇಜುಗಳಿಗೆ ಕಳುಹಿಸಲು ಪ್ರಾರಂಭಿಸಿದ್ದಾರೆ. ಆದರೆ ಈ ರೀತಿ ಮಕ್ಕಳನ್ನು ಶಾಲಾ ಕಾಲೇಜುಗಳಿಗೆ ಕಳುಹಿಸುವವರ ಸಂಖ್ಯೆ ತೀರಾ ಕಡಿಮೆ ಎಂದೇ ಹೇಳಬಹುದು. ಇದಕ್ಕೆ ಉತ್ತಮ ಉದಾಹರಣೆಯೆಂದರೆ ಮೊಳಕಾಲ್ಮೂರು ಸ್ಥಳೀಯ ಪ್ರದೇಶದಲ್ಲಿರುವ ಪಿ.ಟಿ.ಹಟ್ಟಿ ಮತ್ತು ಗಿರಿಜನಯ್ಯನ ಹಟ್ಟಿಗಳೇ ಸಾಕ್ಷಿಗಳಾಗಿವೆ. ಆದರೂ ಸಹ ಕೆಲವೊಂದು ಸಂಪ್ರದಾಯಸ್ಥ ನಗರವಾಸಿ ಕಾಡುಗೊಲ್ಲರು ಮನೆಯನ್ನು ಕಟ್ಟಿಸುವಾಗಲೇ ಅವರಿಗೆಂದೇ ಪ್ರತ್ಯೇಕ ಕೊಠಡಿಯನ್ನು ಕಟ್ಟಿಸುವರು. ಈ ರೀತಿ ಪ್ರತ್ಯೇಕ ಕೊಠಡಿ ನಿರ್ಮಿಸುವುದನ್ನು ನೋಡಿದರೆ ಈ ಮೈನೆರೆದ ಸಂದರ್ಭದಲ್ಲಿ ಆಚರಿಸುವ ಸಂಪ್ರದಾಯ ಇನ್ನೂ ಜೀವಂತವಾಗಿಸುವುದರಿಂದ ಸೂತಕ ಎನ್ನುವುದು ಸಂಪೂರ್ಣವಾಗಿ ತೊಲಗುವುದಾದರೂ ಎಂದು. ಇದಕ್ಕೆ ಶಿಕ್ಷಣದ ಮೂಲಕವೇ ಈ ಒಂದು ಅನಿಷ್ಟ ಪದ್ಧತಿಯನ್ನು ಬೀದಿ ನಾಟಕಗಳನ್ನು ಆಡುವುದರ ಮೂಲಕ ಮೈನೆರೆದ ಹೆಣ್ಣನ್ನು ಹಟ್ಟಿಯಿಂದ ಹೊರಗಿಟ್ಟ ಸಂದರ್ಭದಲ್ಲಿ ಆಗುವ ತೊಂದರೆಗಳ ಏನೇನು ಎಂಬುದನ್ನು ಈ ಸಮುದಾಯದವರಿಗೆ ತಿಳಿಯಪಡಿಸಿದರೆ ಬಹುಶಃ ಕ್ರಮೇಣವಾಗಿ ಈ ಅನಿಷ್ಟ ಸಂಪ್ರದಾಯ ಹೊರಟು ಹೋಗಬಹುದೇನು ಎಂಬುದು ನನ್ನ ಅನಿಸಿಕೆಯಾಗಿದೆ.

### ೩.೧.೪ ವಿವಾಹ

ಕಾಡುಗೊಲ್ಲ ಬುಡಕಟ್ಟಿನಲ್ಲಿ ವಿವಾಹಕ್ಕೆ ಸಂಬಂಧಿಸಿದಂತೆ ಅನೇಕ ಸಾಮಾಜಿಕ ರೂಢಿ ನಿಯಮಗಳಿವೆ. ಇವು ಕೆಲವು ಸಮಯದಲ್ಲಿ ವಿಚಿತ್ರವೆನಿಸಿದರೂ ತಮ್ಮ ಒಂದು ಸಂಸ್ಕೃತಿಯನ್ನು ಪರಂಪರ್ಯವಾಗಿ ಉಳಿಸಿಕೊಂಡು ಬಂದಿರುವುದನ್ನು ಈ ಸಮುದಾಯದ ವಿವಾಹ ಸಂದರ್ಭಗಳಲ್ಲಿ ಕಾಣಬಹುದಾಗಿದೆ. ಸಾಮಾನ್ಯವಾಗಿ ಕಾಡುಗೊಲ್ಲರ ವಿವಾಹ ಪದ್ಧತಿ ಅತ್ಯಂತ ಸರಳವಾಗಿ ಕನಿಷ್ಠ ಐದು ದಿನಗಳ ಕಾಲ ತಮ್ಮ ಹಟ್ಟಿಗಳಲ್ಲೇ ನಡೆಯುತ್ತವೆ. ಈ ಸಮುದಾಯದಲ್ಲಿ ಬಹುಪತ್ನಿತ್ವ ಪದ್ಧತಿ ಬಹು ಹಿಂದಿನ ಕಾಲದಲ್ಲಿ ಜಾರಿಯಲ್ಲಿತ್ತು ಆದರೆ ಇಂದು ಈ ಜನಾಂಗವು ಏಕಪತ್ನಿತ್ವ ವಿವಾಹ ಪದ್ಧತಿಯನ್ನು ಮಾತ್ರ ರೂಢಿಸಿಕೊಂಡು ಇದಕ್ಕೆ ಹೆಚ್ಚು ಮಹತ್ವವನ್ನು ಕೊಡುತ್ತಾರೆ. ಇವರಲ್ಲಿ ಬಂಧುತ್ವಕ್ಕೆ ಸಂಬಂಧಿಸಿದಂತೆ ಹೊರ ಬಾಂಧವ್ಯ ವಿವಾಹ ಪದ್ಧತಿಯನ್ನು ಪಾಲಿಸುತ್ತಾರೆ. ಈ ಸಮುದಾಯದಲ್ಲಿ ವಿಧವಾವಿವಾಹವಾಗಲೀ, ಕೂಡಿಕೆ ವಿವಾಹ ಪದ್ಧತಿಗಳಾಗಲೀ ಜಾರಿಯಲಿಲ್ಲ. ಆದರೆ ಈ ಬಾಲ್ಯವಿವಾಹ ಪದ್ಧತಿಯು ಮಾತ್ರ ಮೊಳಕಾಲ್ಮೂರು ತಾಲೂಕಿನ ಚಿಕ್ಕೇರ ಹಳ್ಳಿ ಗ್ರಾಮದಲ್ಲಿ ಮಾತ್ರ ಸ್ವಲ್ಪ ಪ್ರಮಾಣದಲ್ಲಿ ಕಂಡು ಬರುವುದು.

ಬಹಳ ಹಿಂದಿನ ದಿನಗಳಲ್ಲಿ ಹೆಣ್ಣುಮಕ್ಕಳನ್ನು ಕದ್ದೊಯ್ದು ವಿವಾಹ ಮಾಡಿಕೊಳ್ಳುವ ಪದ್ಧತಿ ಇತ್ತಂತೆ. ಆದರೆ ಪ್ರಸ್ತುತ ಇಂತಹ ವಿವಾಹ ಪದ್ಧತಿಗಳು ಈ ಸಮುದಾಯದಲ್ಲಿ ಎಲ್ಲಿಯೂ ಕಂಡು ಬರುತ್ತಿಲ್ಲ.

ಧಾರ್ಮಿಕ ಕಾರ್ಯಗಳನ್ನು ಮಾಡುವಾಗ ಮತ್ತು ಗಂಡು ಹೆಣ್ಣು ನೋಡಿ ಹೋದಾಗ, ಹೆಣ್ಣಿನ ಕಡೆಯವರು ಹುಡುಗನ ಮನೆಯನ್ನು ನೋಡಲಿಕ್ಕೆ ಹೋಗುವಾಗ ಮತ್ತು ವಾಪಸ್ಸು ಬರುವಾಗ ಅನೇಕ ಶಕುನಗಳನ್ನು ಈ ಸಮುದಾಯದವರು ನೋಡುತ್ತಾರೆ. ಶುಭಕಾರ್ಯಕ್ಕೆ ಹೊರಟಾಗ ಒಂಟಿಬ್ರಾಹ್ಮಣ, ಬೆಕ್ಕು ಅಡ್ಡಬರುವುದು, ಸೌದೆ ಹೊರೆ ಬರುವುದು, ಹಾವು ಅಡ್ಡ ಬಂದರೆ, ಹಜಾಮ ಬಂದರೆ, ಮುಟ್ಟಾದ ಹೆಂಗಸು ಬಂದರೆ, ತಮ್ಮ ಪ್ರಯಾಣವನ್ನು ನಿಲ್ಲಿಸುವರು.

ಮದುವೆಯ ದಿನವನ್ನು ನಿಗದಿಪಡಿಸುವಾಗ ವಾರ, ತಿಥಿ, ನಕ್ಷತ್ರ ಮತ್ತು ಪಂಚಾಂಗವನ್ನು ನೋಡುವುದಿಲ್ಲ ಗಂಡಿನ ತಂದೆ, ತಾಯಿ ಅವರು ಬಂಧು ಬಳಗ ಅವರ ಕೌಟುಂಬಿಕ ಹಿನ್ನೆಲೆ, ಕುಲ, ದೇವರು, ಗುಡಿಕಟ್ಟೆ, ಕಟ್ಟೆಮನೆ ಮತ್ತು ಗಂಡಿನ ಗುಣಲಕ್ಷಣಗಳನ್ನು ನೋಡಿದ ಬಳಿಕವೇ ಗಂಡು ಹೆಣ್ಣುಗಳ ನಿಶ್ಚಿತಾರ್ಥ ಮಾಡುವರು.

ಇಲ್ಲಿ ಹೆಣ್ಣಿಗೆ ಸಂಗಾತಿಯ ಆಯ್ಕೆಯ ವಿಷಯದಲ್ಲಿ ಯಾವುದೇ ರೀತಿಯ ಸ್ವಾತಂತ್ರ್ಯವಿರುವುದಿಲ್ಲ. ಜನಾಂಗದ ಹಿರಿಯ ಮುಖಂಡರು, ಕುಟುಂಬದ ಹಿರಿಯರು, ಸಂಬಂಧಿಕರು ಮತ್ತು ತಂದೆ ತಾಯಿಯವರ ಪಾತ್ರವೇ ಪ್ರಮುಖವಾಗಿರುತ್ತದೆ.

ನನ್ನ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಶೇಕಡ ೯೦ರಷ್ಟು ಮಹಿಳೆಯರ ವಿವಾಹಗಳು ಸಂಗಾತಿಗಳ ಆಯ್ಕೆಯಲ್ಲಿ ಸಮುದಾಯದ ಹಿರಿಯರು ಆಯ್ಕೆ ಮಾಡಿರುತ್ತಾರೆ.

ಕೆಲವೊಂದು ಸಲ ಇಲ್ಲಿ ಗಂಡಿನ ಬಗ್ಗೆ ಒಪ್ಪಿಗೆಯನ್ನು ಪಡೆದಿರುವುದಿಲ್ಲ, ಒಂದೊಂದು ಸಲ ಹೆಣ್ಣು ಗಂಡನ್ನು ನೋಡದೆ ಕೇವಲ ಮದುವೆಯ ದಿನದಂದೇ ನೋಡುವಷ್ಟರ ಮಟ್ಟಿಗೆ ಇಲ್ಲಿ ಹೆಣ್ಣನ್ನು ಈ ಸಮುದಾಯ ನಡೆಸಿಕೊಳ್ಳುತ್ತದೆ.

ಈ ಸಮುದಾಯದಲ್ಲಿ ಬುಡಕಟ್ಟು ಒಳಬಾಂಧವ್ಯ ರೂಢಿಯಲ್ಲಿದ್ದು, ಕುಲ ಹೊರ ಬಾಂಧವ್ಯ ಅನುಸರಣೆಯಲ್ಲಿದೆ, ಅಂದರೆ ಮದುವೆಯಾಗುವ ಹೆಣ್ಣು ಅದೇ ಹಟ್ಟಿಯ ಹುಡುಗನನ್ನು ಮದುವೆಯಾಗುವ ಆಗಿಲ್ಲ.

ಕೆಲವು ಪ್ರದೇಶಗಳಲ್ಲಿ ಈ ಕಾಡುಗೊಲ್ಲರು ಒಂದು ನಿರ್ದಿಷ್ಟ ಹಟ್ಟಿಯಲ್ಲಿಯೇ ಕೊಡು ತರುವ ಸಂಪ್ರದಾಯವನ್ನಿಟ್ಟುಕೊಂಡಿದ್ದಾರೆ.

ಇತ್ತೀಚಿಗೆ ಕೆಲವೊಂದು ವಿದ್ಯಾವಂತ ಯುವತಿಯರು ತಮ್ಮ ಸಂಗಾತಿಯ ಆಯ್ಕೆಯ ವಿಷಯದಲ್ಲಿ ಸ್ವಲ್ಪಮಟ್ಟಿನ ಸ್ವಾತಂತ್ರ್ಯವನ್ನು ಹೊಂದಿದ್ದಾಳೆ.

### ೩.೧.೫ ನಿಶ್ಚಿತಾರ್ಥ

ಈ ಸಮುದಾಯದಲ್ಲಿ ನಿಶ್ಚಿತಾರ್ಥ ಸಂಪ್ರದಾಯವನ್ನು ಮನೆ ನೋಡುವುದು, ತಾಂಬೂಲ ಬದಲಾಯಿಸುವುದು, ವೀಳ್ಯೆವು ಇಟ್ಟುಕೊಂಡು ಬರುವುದು ಎಂದು ವಿಧ ವಿಧವಾಗಿ ಕರೆಯುವುದುಂಟು. ಗಂಡಿನ ಕಡೆಯವರು ಹೆಣ್ಣಿನ ಮನೆಗೆ ಬಂದು ಹೋದ ಬಳಿಕ ಹೆಣ್ಣಿನ ಕಡೆಯವರು ಗಂಡಿನ ಕುಲ, ಗೋತ್ರ, ಸಂಬಂಧಿಕರ ಹಿನ್ನೆಲೆಗಳ ಬಗ್ಗೆ ಚರ್ಚಿಸಿ ಇವರಿಗೆ ಎಲ್ಲಾ ಶಕುನಗಳು ಸರಿಯಾಗಿ ಕಂಡುಬಂದ ಬಳಿಕ ತಮ್ಮ ಒಪ್ಪಿಗೆಯನ್ನು ಗಂಡಿನ ಕಡೆಯವರಿಗೆ ತಿಳಿಸಿ ಸಂಬಂಧವನ್ನು ಬೆಳೆಸಲು ಖಚಿತ ನಿರ್ಧಾರವನ್ನು ತೆಗೆದುಕೊಳ್ಳುವರು. ಅನಂತರ ಒಂದು ಶುಭದಿನದಂದು ನಿಶ್ಚಿತಾರ್ಥ ಕಾರ್ಯವನ್ನು ಸಾಮಾನ್ಯವಾಗಿ ತಮ್ಮ ಮನೆಯಲ್ಲಿಯೇ ಇಟ್ಟುಕೊಳ್ಳುತ್ತಾರೆ.

ಗಂಡಿನ ಕಡೆಯವರು ನಿಶ್ಚಿತಾರ್ಥಕ್ಕೆ ಹೆಣ್ಣಿನ ಮನೆಗೆ ಬಂದಾಗ "ಜಾಡಿಪೂಜೆ" ಆದನಂತರ ನಿಶ್ಚಿತಾರ್ಥ ಮಾಡುವ ಹೆಣ್ಣನ್ನು ಒಳಗಿನಿಂದ ಕರೆದುಕೊಂಡು ಬಂದು ಕರಿಕಂಬಳಿ ಗದ್ದುಗೆಗೆ ಕೈಮುಗಿಸಿ ಗಂಡಿನ ಕಡೆಯವರು ತಂದಿದ್ದ ಸೀರೆ, ಕುಪ್ಪಸ, ಹಣ್ಣು, ಕಾಯಿ, ಕೊಬ್ಬರಿ, ಉತ್ತತ್ತಿ, ಕಡ್ಲೆ ಮುಂತಾದ ಸಾಮಾನುಗಳನ್ನು ಐದು ಜನ ಮುತ್ತೈದೆಯರು ಮದುವೆಯಾಗುವ ಹುಡುಗಿಯ ಸೆರಗಿಡಿದು ಉಡಿಯನ್ನು ತುಂಬಿಸಿಕೊಳ್ಳುವರು.

ಅನಂತರ ಹುಡುಗಿಯ ಕಡೆ ಒಬ್ಬ ಯಜಮಾನ ಮತ್ತು ಹುಡುಗ್ಗನ ಕಡೆ ಒಬ್ಬ ಯಜಮಾನ ಕರಿಕಂಬಳಿ ಗದ್ದುಗೆಯ ಮುಂದೆ ಎದುರು, ಬದುರು ನಿಂತುಕೊಂಡು ತಲೆಗೆ ರುಮಾಲನ್ನು ಸುತ್ತಿಕೊಂಡು ಒಬ್ಬ "ನಮ್ಮ ಹೆಣ್ಣನ್ನು ನಿಮಗೆ ಕೊಟ್ವಿ" ಎಂದು ಇನ್ನೊಬ್ಬ "ನಿಮ್ಮ ಹೆಣ್ಣನ್ನು ನಾವು ಕೊಂಡ್ವಿ" ಎಂಥಲೂ ನಿಶ್ಚಿತಾರ್ಥ ಕಾರ್ಯವನ್ನು ಮಾಡುತ್ತಾರೆ.

ನಿಶ್ಚಿತಾರ್ಥ ಕಾರ್ಯವನ್ನು ಮಾಡುವುದರೊಂದಿಗೆ ಗಂಡನ್ನು ಖಾಯಂ ಮಾಡಿಕೊಳ್ಳುತ್ತಾರೆ. ಯಾವುದೇ ಕಾರಣಕ್ಕೂ ಈಗ ಗಂಡಿನ ಮತ್ತು ಹೆಣ್ಣಿನ ಕಡೆಯವರು ಮಾತು ಬದಲಾಯಿಸುವಂತಿಲ್ಲ. ಮದುವೆಯನ್ನು ನಿಲ್ಲಿಸುವಂತಿಲ್ಲ ಮದುವೆಯ ದಿನಾಂಕವನ್ನು ಇತ್ತೀಚೆಗೆ ನಿಶ್ಚಿತಾರ್ಥದ ದಿನವೇ ಗೊತ್ತುಪಡಿಸುತ್ತಾರೆ.

ಈ ಸಮುದಾಯದವರು ಬೇರೆ ಸಮುದಾಯದವರಲ್ಲಿರುವಂತೆ ಆಷಾಢ ಮಾಸ ಗೊಲ್ಲರ ಮದುವೆಗೆ ಅಡ್ಡಿ ಬರುವುದಿಲ್ಲ "ಅಕ್ಕಿ ಎಂದು ಹೊರಡುವುದೋ ಅಂದೆ ಮದ್ವೆ" ಇವರಿಗೆ ಯಾವುದೇ ಟೈಮ್ ಪಂಚಾಂಗ ಯಾವುದೂ ಲೆಕ್ಕಕ್ಕೆ ಇಲ್ಲ.

ಈ ಸಮುದಾಯದಲ್ಲಿ ಈಗಲೂ ಗಂಡಿನ ಕಡೆಯವರು ಹೆಣ್ಣಿಗೆ ತೆರವು ಕೊಟ್ಟು ಹೆಣ್ಣು ತರುವ ಪದ್ಧತಿ ಇದೆ. ಇದರಿಂದ ಹದಿನಾರು, ಇಪ್ಪತ್ತುನಾಲ್ಕು, ಮೂವತ್ತು ಅಥವಾ ನೂರುರೂಪಾಯಿ ತೆರಕೊಟ್ಟು, ಒಂದು ಚೀಲ ಅಕ್ಕಿ, ಒಂದು ಚೀಲ ರಾಗಿ, ಎರಡು ಮಣ ಬೆಲ್ಲ ಹೆಣ್ಣಿನ ಮನೆಗೆ ಕೊಡುವರು.

ಹೆಣ್ಣಿಗೆ ಧಾರೆಸೀರೆ, ಮದುವೆ ಸೀರೆ, ಬೆಂಡೋಲೆ, ಗೆಜ್ಜೆಪಟ್ಟಿ, ಮಾಟೀಲು ಇತ್ಯಾದಿ ಒಡವೆಗಳನ್ನು ನಿಶ್ಚಿತಾರ್ಥದ ದಿನವೇ ಖಚಿತಪಡಿಸಿಕೊಂಡು ಮದುವೆಗೆ ಸಿದ್ಧತೆಯನ್ನು ಮಾಡಿಕೊಳ್ಳುತ್ತಾರೆ.

ಇಲ್ಲಿ ನಿಶ್ಚಿತಾರ್ಥದ ದಿನ ಮದುವೆಯ ಗಂಡು ಬಂದಿರುವುದಿಲ್ಲ ಅಂದು ಅವನು ಹೊಲದಲ್ಲಿ ಉಳಿಮೆಮಾಡಲು, ದನ ಕಾಯಲು ಅಥವಾ ಕುರಿಕಾಯಲೋ ಹೋಗುವ ಪದ್ಧತಿ ರೂಢಿಯಿತ್ತು.

ಆದರೆ ಇತ್ತಾಚಿಗೆ ಬದಲಾವಣೆಯ ಗಾಳಿಯಿಂದಾಗಿ ವಿದ್ಯಾವಂತ ನಗರವಾಸಿ ತಂದೆ ತಾಯಂದಿರು ನಿಶ್ಚಿತಾರ್ಥಕ್ಕೆ ಯುವಕ ಯುವತಿಯರನ್ನು ಕೂರಿಸಿ ಹೂವಿನ ಹಾರವನ್ನು ಬದಲಾಯಿಸಿಕೊಳ್ಳುವುದರ ಮೂಲಕ ನಿಶ್ಚಿತಾರ್ಥವನ್ನು ನೆರವೇರಿಸಿಕೊಳ್ಳುವರು. ಈ ರೀತಿಯಾಗಿ ಇಂದು ಹಟ್ಟಿಗಳಲ್ಲಿ ನಿಶ್ಚಿತಾರ್ಥ ಸಮಾರಂಭವನ್ನು ಏರ್ಪಡಿಸುತ್ತಾರೆ.

**೩.೧.೬ ಮದುವಣಗಿತ್ತಿಯ ಶಾಸ್ತ್ರ**

ಕಾಡುಗೊಲ್ಲ ಸಮುದಾಯದಲ್ಲಿ ಮದುವಣಗಿತ್ತಿಯ ಶಾಸ್ತ್ರ ಇತರೆ ಸಮುದಾಯಗಳಲ್ಲಿ ಮಾಡುವ ಮದುವಣಗಿತ್ತಿಯ ಶಾಸ್ತ್ರಕ್ಕಿಂತ ವಿಭಿನ್ನವಾಗಿದೆ. ಇದು ಬಹುತೇಕ ಎಲ್ಲಾ ಪ್ರದೇಶದ ಕಾಡುಗೊಲ್ಲರು ಆಚರಿಸುವ ಸಂಪ್ರದಾಯದಂತಿದೆ. ನನ್ನ ಕ್ಷೇತ್ರ ಕಾರ್ಯದ ಸಂದರ್ಭದಲ್ಲಿ ನಾನು ಆಯ್ದುಕೊಂಡ ಕೆಲವೊಂದು ಗ್ರಾಮದ ಗೊಲ್ಲರ ಹಟ್ಟಿಗಳಲ್ಲಿ ಮದುವೆ ಸಂಪ್ರದಾಯಗಳೆಲ್ಲವೂ ಒಂದೇ ತೆರನಾಗಿ ಕಂಡುಬಂದವು.

ಮದುವಣಗಿತ್ತಿಯಾದ ಹೆಣ್ಣನ್ನು ಮನೆಯಿಂದ ಕರೆದುಕೊಂಡು ಹೋಗುವ ಸಂದರ್ಭದಲ್ಲಿ ಈಕೆಯ ಮುಂದೆ ಹೆಂಗೆಳೆಯರು ಕಳಸವನ್ನು ತೆಗೆದುಕೊಂಡು ಕರಿಯ ಕಂಬಳಿ, ತೆಂಗಿನಕಾಯಿ, ತುಂಬಿದ ಚಂಬು ನೀರು, ಎಲೆ ಅಡಿಕೆ ತೆಗೆದುಕೊಂಡು ಕುರಿಯ ಹಟ್ಟಿಯೊಳಗೆ ಹೋಗುವರು. ಅಲ್ಲಿ ಕರಿಕಂಬಳಿ ಗದ್ದಿಗೆಯನ್ನು ಹಾಸಿ, ಅಕ್ಕಿಯನ್ನು ಹಾಕಿ ಹಸಿ ಬರೆದು ಮದುವಣಗಿತ್ತಿಯನ್ನು ಕುಂದಿರಿಸಿ ದೇವರು ಜಡೇವು ಪೂಜೆಮಾಡಿ ಕಾಯಿ ಒಡೆದು ಐದಾರು ಜನ ಸೇಸೆ ಇಟ್ಟು, ಅರಿಶಿಣ ಎಣ್ಣೆಯನ್ನು ಹಚ್ಚಿ ಆನಂತರ ತಲೆಗೆ ಹಾಲು ಒತ್ತುತ್ತಾರೆ. ನಂತರ ಮದುವಣಗಿತ್ತಿಯನ್ನು ಮನೆಗೆ ಕರೆದುಕೊಂಡು ಬರುವರು. ಈ ರೀತಿ ತಯಾರಿಸಂದರ್ಭದಲ್ಲಿ ಈ ಸಮುದಾಯದ ಹಿರಿಯ ಮಹಿಳೆಯರು ಮದುವಣಗಿತ್ತಿಗೆ ಹಾಲೊತ್ತುವ ಸಂದರ್ಭದಲ್ಲಿ ತ್ರಿಪದಿಯಿಂದ ಕೂಡಿರುವ ಹಾಡುಗಳನ್ನು ಹಾಡುವರು. ಅವು ಇಡೀ ತಮ್ಮ ಸಮುದಾಯವನ್ನು ಕುರಿತ ಹಾಡುಗಳಾಗಿರುತ್ತವೆ.

ಹೆಣ್ಣಿನ ತಲೆಗೆ ಹಾಲೊತ್ತಿ ಸ್ನಾನ ಮಾಡಿಸುತ್ತಾರೆ. ಅನಂತರ ಮದುವೆಗೆ ತಂದಿದ್ದ ಸೀರೆ ಒಡವೆಗಳನ್ನು ಇಟ್ಟು ಕಳಶಕ್ಕೆ ಹೊಂಬಾಳೆ, ವೀಳೆಯದೆಲೆ ಇವುಗಳನ್ನು ಇಟ್ಟು ಪೂಜೆ ಮಾಡುತ್ತಾರೆ.

ಹೆಣ್ಣಿನ ಮನೆಯ ಹೊರ ಮುಂಭಾಗದಲ್ಲಿ ನೆಲದಲ್ಲಿ ರಂಗೋಲಿ ಹಾಕಿ ನಾಲ್ಕು ಗುಂಡಿಗಳನ್ನು ತೋಡಿ ಅದರಲ್ಲಿ ಭತ್ತವನ್ನು ಹಾಕಿ ನಾಲ್ಕು ಅಥವಾ ಐದು ಜನ ಗರತಿಯರು ಒನಕೆಯಿಂದ ಕುಟ್ಟುವ ಸಂಪ್ರದಾಯವಿದೆ. ಕಟ್ಟುವುದಕ್ಕಿಂತ ಮುಂಚೆ ಉಡಿ ತುಂಬುವರು. ಇಲ್ಲಿ ಮದುವಣಗಿತ್ತಿಗೆ ಉಡಿಯನ್ನು ತುಂಬಿದ ನಂತರ ೪ ಅಥವಾ ೫ ಜನ ಗರತಿಯರು ಕುಟ್ಟುವರು ಇದನ್ನು ಒಳ್ಳಕ್ಕಿ ಒಯ್ಯುವ ಕಾರ್ಯಕ್ರಮ ಎನ್ನುವರು.

ಹಸೆ ಹಚ್ಚುವುದು ಎಂದರೆ ಕರಿಯ ಕಂಬಳಿಯನ್ನು ಗದ್ದುಗೆಯನ್ನಾಗಿ ಹಾಸಿ ಅದರ ಮೇಲೆ ತೆಳ್ಳಗೆ ಅಕ್ಕಿಯನ್ನು ಹರವಿ ಅದರಲ್ಲಿ ಬೆರಳಿನಿಂದ ಹಸೆಯನ್ನು ಬರೆಯುವುದು.

ಹಸೆಯ ಮೇಲೆ ಒಂದು ಬಿಳಿ ಬಟ್ಟೆಯನ್ನು ಹಾಸಿ ಸುತ್ತಲೂ ಕರಿಯ ಕಂಬಳಿಯನ್ನು ಹಾಸುತ್ತಾರೆ. ಹಸೆಯ ಮೇಲೆ ಕಳಶ, ಕನ್ನಡಿ, ಇವುಗಳನ್ನಿಟ್ಟು ನಾಲ್ಕು ಮೂಲೆಗೂ ನಾಲ್ಕು ಬೆಲ್ಲದ ಉಂಡೆ, ನಾಲ್ಕು ಬೆಳ್ಳುಳ್ಳಿ, ಜೀರಿಗೆ, ಮೆಣಸು ಮೊದಲಾದವುಗಳನ್ನಿಟ್ಟು ಅದನ್ನು ಪೂಜೆ ಮಾಡುತ್ತಾರೆ. ಇದನ್ನು ಮೊದಲನೆಯ ಹಸೆಯೆಂದು ಕರೆಯುತ್ತಾರೆ.

ಈ ಹಸೆಯ ಮೇಲೆ ಮದುವಣಗಿತ್ತಿಯನ್ನು ಕೂರಿಸುತ್ತಾರೆ. ಅನಂತರ ಅದೆಲ್ಲವನ್ನು ತೆಗೆದು ಮೊದಲಿನಂತೆಯೇ ಕರಿಯ ಕಂಬಳಿಯನ್ನು ಹಾಸಿ ಎರಡನೆಯ ಹಸೆಯನ್ನು ಬರೆಯುತ್ತಾರೆ. ಮದುವಣಗಿತ್ತಿಗೆ ಸೇಸೆಯಿಡುತ್ತಾರೆ. ಹೀಗೆ ಐದು ಬಾರಿ ಮಾಡುತ್ತಾರೆ.

ಈ ರೀತಿಯಾಗಿ ಕಾಡುಗೊಲ್ಲ ಸಮುದಾಯದಲ್ಲಿ ಮದುವಣಗಿತ್ತಿಯ ದಿನ ಒಳ್ಳಕ್ಕಿ ಒಯ್ಯುವ ಸಂದರ್ಭದಲ್ಲಿ ಹಟ್ಟಿಯ ಹಿರಿಯ ಮಹಿಳೆಯರು ಹಾಡುವ ಹಾಡುಗಳು ಕೇಳಲು ಕಿವಿಗೆ ಇಂಪಾಗಿವೆ.

೧. ಒಳ್ಳಕ್ಕಿ ಒಯ್ಯಾಕ ಒಳಗಾಳ ಸೊಸೆಬಾರೇ
ಮೇಲೆ ಮಾಳಿಗೆಯ ಮನೆಯಮ್ಮೋ
ಸುವ್ವೇ ಸುವ್ವೇ ಸುವಲಾಲಿ
೨. ಮೇಲೇನೆ ಮಾಳಿಗೆಯ ಮನೆಯೋಳೆ ತಾವಲ್ಲಿ
ಒಳ್ಳಕ್ಕಿ ಒಯ್ಯಾಕ ಬರಬೇಕೆ
ಸುವ್ವೇ ಸುವ್ವೇ ಸುವಲಾಲಿ
೩. ಅಂಗೈಯಲಿ ಕುಟ್ಟುತ್ತ, ಮುಂಗೈಲಿ ಸಾಸುತ್ತ
ಅಂಬಾರಕ ಒಣಿಕೆ ದಡಲೆಂದೇ
ಸುವ್ವೇ ಸುವ್ವೇ ಸುವಲಾಲಿ
೪. ಅಂಬಾರಕ ಒಣಿಕೆ ದಡಲೆಂದೇ ಕುಟ್ಟಾರೆ
ಗೋಪಾಲ ಕೃಷ್ಣನ ಮಡದಿರೋ
ಸುವ್ವೇ ಸುವ್ವೇ ಸುವಲಾಲಿ
೫. ಹತ್ತು ಮಾಣದಕ್ಕಿ, ಎತ್ತಿಗೇರಿಕೊಂಡು
ಪಟ್ಟಸಾಲೆಗೆ ಸುರುವೋರೆ
ಸುವ್ವೇ ಸುವ್ವೇ ಸುವಲಾಲಿ
೬. ಪಟ್ಟನೆ ಸಾಲಿಗೆ ಸುರುವದಂತ ಅಕ್ಕಿನ (ಯ)
ಹೆತ್ತಮ್ಮಯ್ಯಾ ಅಳಕಾಳೆ
ಸುವ್ವೇ ಸುವ್ವೇ ಸುವಲಾಲಿ
೭. ಆರು ಮಾಣದಕ್ಕಿ ಹೊರಿಗೇರಿಕೊಂಡು
ಸ್ವಾಮಿ ಶಾಲೆಗೆ ಸುರುವೋರೆ
ಸುವ್ವೇ ಸುವ್ವೇ ಸುವಲಾಲಿ
೮. ಸ್ವಾಮೀನೆ ಶಾಲೆಗೆ ಸುರುವಿದಂತ ಅಕ್ಕಿ
ತಾಯಿ ಅಂಪಯ್ಯ ಅಳಕಾಳೆ
ಸುವ್ವೇ ಸುವ್ವೇ ಸುವಲಾಲಿ
೯. ಹತ್ತು ಖಂಡಗದಕ್ಕಿ, ಕೊಟ್ಟಕ್ಕೆಸರುಮಾಡಿ,
ಹಟ್ಯಾಗೆ ಕಾಳೇ ಇಳಿಸ್ಯಾರೆ
ಸುವ್ವೇ ಸುವ್ವೇ ಸುವಲಾಲಿ
೧೦. ಹಟ್ಟಿಯಾಗೆ ಕಾಳೆ ಇಳಿಸಾರೆ ತಿಮ್ಮಣ್ಣನ
ಮೂವದ ಮೊಮ್ಮಗನ ಮದುವೆಗೆ
ಸುವ್ವೇ ಸುವ್ವೇ ಸುವಲಾಲಿ

### ೩.೧.೭ ಅರುಣೆ ತರುವ ಮತ್ತು ಚಪ್ಪರ ಹಾಕುವ ಶಾಸ್ತ್ರ

ಅರುಣೆ ಎಂದರೆ ವಿಶೇಷ ರೀತಿಯ 'ಮಡಕೆ' ಎಂದರ್ಥ. ಈ ಅರುಣೆ ತರುವ ಶಾಸ್ತ್ರ ಕಾಡುಗೊಲ್ಲರ ಹೆಣ್ಣಿನ ಮನೆಯಲ್ಲಿ ನಡೆಯುತ್ತದೆ. ಈ ಶಾಸ್ತ್ರದಲ್ಲಿ ಸಂಪೂರ್ಣವಾಗಿ ಮಹಿಳೆಯ ಪಾತ್ರವೇ ಹೆಚ್ಚಾಗಿ ಕಂಡುಬರುವುದು. ಅರುಣೆ ತರಲು ಹೋಗುವುದಕ್ಕಿಂತ ಮುಂಚಿತವಾಗಿ ಐದು ಜನ ಮುತ್ತೈದೆಯರನ್ನು ಒಂದು ಕಡೆ ಕೂರಿಸಿ, ವೀಳೆಯದೆಲೆ ಕೊಟ್ಟು ಇಬ್ಬರಿಗೆ ತಮ್ಮ ಮನೆಯ ಗಡಿಗೆಗಳನ್ನು ಹೊರಿಸಿ ಕಳುಹಿಸುವರು. ಇದರಲ್ಲಿ ಇಬ್ಬರು ಮಾತ್ರ ಗಡಿಗೆಗಳನ್ನು ಹೊತ್ತುಕೊಂಡು ಉಳಿದವರು ಕಳಶವನ್ನು, ಹಿಡಿದುಕೊಂಡು ಹೋಗುವರು. ತಾವು ತೆಗೆದುಕೊಂಡು ಹೋಗಿದ್ದ ಅಕ್ಕಿ, ಬೆಲ್ಲ, ಬೇಳೆ, ಎಲೆ, ಅಡಿಕೆ, ಕಾಯಿ ಮತ್ತು ದಕ್ಷಿಣವನ್ನು ಕುಂಬಾರರಿಗೆ ಕೊಟ್ಟು ಅಲ್ಲಿ ಕುಂಬಾರನೇ ಬಳಸುವಂತ ಚಿಕ್ಕ ಗುಂಡುಕಲ್ಲನ್ನು ಪೂಜಿಸಿ ಅಲ್ಲಿಂದ ಮುತ್ತೈದೆಯರು ಐದು ಮಡಕೆಗಳನ್ನು ಹೊತ್ತುಕೊಂಡು ಬಂದ ಮೇಲೆ ಇಲ್ಲಿ "ಅರುಣೆಗುಡ್ಲು" ಎಂದು ಪ್ರತ್ಯೇಕವಾಗಿ ಕಟ್ಟಿರುವ ಸ್ಥಳದಲ್ಲಿ ಇಡುವರು. ತದನಂತರ ಮಹಿಳೆಯರು ಸುಣ್ಣದಿಂದ ಬಳಿದು ಅವಕ್ಕೆ ರಿಜರಿಗಿಡ ತಪ್ಪಲಿನ ರಸ ಇಲ್ಲವೇ ತೊಂಡೆಸೊಪ್ಪಿನ ರಸದಿಂದ ಬಣ್ಣ ಬಣ್ಣದ ಚಿತ್ತಾರವನ್ನು ಬಳಿದು ತಯಾರು ಮಾಡುವರು. ಇವಕ್ಕೆ 'ಅರುಣೆ' ಎಂದು ಕರೆಯುತ್ತಾರೆ. ನಮ್ಮ ಪ್ರದೇಶದಲ್ಲಿ ಇವಕ್ಕೆ 'ಐರಿಣಿ' ತರುವುದು ಎನ್ನುವರು. ಈ ಸಮುದಾಯದಲ್ಲಿ ಅರುಣೆಗಳನ್ನು ಪವಿತ್ರ ಎಂದು ಭಾವಿಸಿರುವ ಈ ಸಮುದಾಯ ಇವುಗಳನ್ನು ಯಾವ ರೀತಿಯ ಮೈಲಿಗೆಯಾಗದಂತೆ ನಾಯಿ, ಕಾಗೆ, ಮುಟ್ಟದಂತೆ ನೋಡಿಕೊಳ್ಳಲು ಇಲ್ಲಿ ವಯಸ್ಸಾದ ಮಹಿಳೆಯನ್ನು ಕಾಯಲು ಬಿಟ್ಟಿರುತ್ತಾರೆ. ಅಂದರೆ ಇಲ್ಲಿ ಪ್ರತಿಯೊಂದಕ್ಕೂ ಮಹಿಳೆಯನ್ನು ಬಳಸುತ್ತಿರುವುದರಿಂದ ಅವಳಿಗೆ ಹೆಚ್ಚು ಪ್ರಾಮುಖ್ಯತೆ ಇರುವುದು ಕಂಡುಬರುತ್ತದೆ. ಈ ಸಮುದಾಯ ವಿವಾಹದ ಪದ್ಧತಿಯಲ್ಲಿ ಅರುಣೆಗೆ ಬಹಳ ಮಹತ್ವಕೊಡುತ್ತಾರೆ. ಮತ್ತು ಪವಿತ್ರ ವಸ್ತುಗಳೆಂದು ಭಾವಿಸಿ ಪೂಜಿಸುತ್ತಾರೆ.

ಚಪ್ಪರ ಹಾಕುವ ಶಾಸ್ತ್ರದಲ್ಲಿ ಮಹಿಳೆಯ ಪಾತ್ರ ಅಷ್ಟು ಪ್ರಾಮುಖ್ಯತೆ ಇರುವುದು ಕಂಡು ಬರುವುದಿಲ್ಲ. ಇದರಲ್ಲಿ ಪುರುಷನ ಪಾತ್ರವೇ ಹೆಚ್ಚು. ಇಲ್ಲಿ ಚಪ್ಪರಕ್ಕೆ ಬೇಕಾದ ಸಾಮಾಗ್ರಿಯನ್ನು ತರಲು ಹೋಗುವುದಕ್ಕಿಂತ ಮುಂಚೆ ಅವರನ್ನು ಒಂದೆಡೆ ಕೂರಿಸಿ ಹೆಣ್ಣಿನ ಚಪ್ಪರಕ್ಕೆ ಐದು ಸೇರು ಅಕ್ಕಿ, ಮೂರು ತೆಂಗಿನ ಕಾಯಿ, ಐದು ಅಚ್ಚು ಬೆಲ್ಲ, ಐದು ಉತ್ತುತ್ತೆ ಹಣ್ಣು, ಐದು ಬೆಳ್ಳುಳ್ಳಿ, ಐದು ಅರಿಶಿನ ಕೊನೆಯನ್ನು ಇದೇ ರೀತಿಯಲ್ಲಿ ಮೂರುಸೇರು ಅಕ್ಕಿ ಗಂಡಿನ ಚಪ್ಪರಕ್ಕೆ ಉಳಿದವೆಲ್ಲಾ ಹೆಣ್ಣಿನ ಚಪ್ಪರಕ್ಕೆ ಕೊಡುವ ರೀತಿಯಲ್ಲಿಯೇ ಕೊಟ್ಟು ಕೊಡಲಿ ಮತ್ತು ಕುಡುಗೋಲು ಎರಡನ್ನು ಒಂದೆಡೆ ಇಟ್ಟು ಅರಿಶಿಣ, ಕುಂಕುಮದಿಂದ ಮಹಿಳೆ ಪೂಜಿಸಿ ಕಳುಹಿಸುವರು. ಅನಂತರ ಅವರು ಚಪ್ಪರಕ್ಕೆ ಬೇಕಾದ ಸಾಮಾಗ್ರಿ ತರಲು ಹೋದವರು ಬಂದ ಮೇಲೆ ಮೊದಲನೆಯದಾಗಿ ದೊಡ್ಡ ಚಪ್ಪರವನ್ನು ಅನಂತರ ಐದುಕಳ್ಳಿಯ ಗೂಟವನ್ನು ನೆಟ್ಟು ಹೆಣ್ಣಿನ ಚಪ್ಪರವನ್ನು ಐದು ಕಳ್ಳಿಯ ಗೂಟನೆಟ್ಟು ಗಂಡಿನ ಚಪ್ಪರವನ್ನು ತೆಂಗಿನ ಗರಿಗಳಿಂದ, ಅತ್ತಿ ತಪ್ಪಲು ಮತ್ತು ಹೊಂಗೆ ತಪ್ಪಲಿನಿಂದ ಚಪ್ಪರವನ್ನು ಹಾಕುವುದು ಇಂದಿಗೂ ಮೊಳಕಾಲ್ಮೂರು ತಾಲೂಕಿನ ಈ ಸಮುದಾಯದವರಲ್ಲಿ ಕಂಡು ಬರುತ್ತದೆ.

### ೩.೧.೮ ಧಾರೆ

ಧಾರೆ ಮುಹೂರ್ತ ಮುಂಜಾನೆಯೇ ಹೆಣ್ಣಿಗೆ ತನ್ನ ಮನೆಯಲ್ಲಿ ಎಣ್ಣೆ, ಅರಿಶಿಣ ಹಚ್ಚಿ ನೀರು ಹಾಕುತ್ತಾರೆ. ಬಳಿಕ ಅವಳಿಗೆ ಬಿಳಿಸೀರೆಯನ್ನು ಉಡಿಸಿ ಮನೆಯಿಂದ ಪಕ್ಕದಲ್ಲಿರುವ ಅರುಣೆಗುಡ್ಲಿಗೆ ಕರೆದುಕೊಂಡು ಹೋಗುತ್ತಾರೆ. ಅಲ್ಲಿ ಆಕೆಯಿಂದ ಪೂಜೆಯನ್ನು ಮಾಡಿಸಿ ಅರುಣೆಯನ್ನು ತಲೆಯ ಮೇಲೆ ಹೊತ್ತುಕೊಂಡು ಹೆಣ್ಣಿನ ಚಪ್ಪರದ ಕೆಳಗೆ ಇಡುತ್ತಾಳೆ. ನಂತರ ಅವಳನ್ನು ಮದುವೆ ಹೆಣ್ಣಿಗೆಂದೇ ನಿರ್ಮಿಸಿದ ಚಪ್ಪರದಲ್ಲಿ ಕೂರಿಸಿ ಅವಳಿಗೆ ಮೂರು ಹಸೆಯನ್ನು ಗಂಡಿಗೆ ನಾಲ್ಕು ಹಸೆಯನ್ನು ಹಚ್ಚುವರು. ಈ ಹೆಣ್ಣಿನ ಚಪ್ಪರದ ನಾಲ್ಕು ಮೂಲೆಗೂ ಇಟ್ಟಿರುವ ಗಡಿಗೆ ಮಗಿಗಳ ಮಧ್ಯೆ ಒಂದು ಕುಣಿಯನ್ನು ಮಾಡಿ ಅದಕ್ಕೆ ಕುರಿಗೊಬ್ಬರವನ್ನು ಹಾಕಿ ಅದರ ಮೇಲೆ ಅರುಣೆಯನ್ನು ಇಡುತ್ತಾರೆ. ಈ ನಾಲ್ಕು ಗಡಿಗೆಗಳ ಸುತ್ತಲೂ ಬರುವಂತೆ ಅಂಗುದಾರವನ್ನು ಸುತ್ತುವರು. ಈ ಅಂಗುದಾರದ ಒಂದೊಂದು ಎಳೆಯೂ ನಾಲ್ಕು ಗಡಿಗೆಗಳನ್ನೂ ತಾಗುವಂತಿದ್ದು ಐದು ಎಳೆಗಳನ್ನೂ ಸುತ್ತಿ ಧಾರೆಯ ಹಸೆಯನ್ನು ಬರೆಯುತ್ತಾರೆ. ಹೆಣ್ಣನ್ನು ಧಾರೆಯ ಹಸೆಯ ಮೇಲೆ ಕೂರಿಸಿ ಬಂಧು ಬಳಗದವರೆಲ್ಲರೂ

ಅವಳ ತಲೆಗೆ ಹಾಲನ್ನು ಒತ್ತುತ್ತಾರೆ. ಅನಂತರ ಗಂಡನ್ನು ಹೆಣ್ಣಿನ ಚಪ್ಪರಕ್ಕೆ ಕರೆತಂದು ಹೆಣ್ಣಿನ ಪಕ್ಕದಲ್ಲಿ ಕೂರಿಸಿ ಅಕ್ಕಿ ಮತ್ತು ಅರಳು ಸೇರಿರುವ ಬೀರಕ್ಕಿಯನ್ನು ಹೆಣ್ಣಿನವರು ಗಂಡಿನವರ ಮೇಲೆ, ಗಂಡಿನವರು ಹೆಣ್ಣಿನವರ ಮೇಲೆ ಎಸೆಯುತ್ತಾರೆ. ಇದಾದ ನಂತರ ಪೂಜಾರಿ, ಗೌಡ ಮತ್ತು ಹಿರಿಯರು ಸೇರಿ ಮೂರು ಕಟ್ಟೆಯ ಮನೆಯವರೆಲ್ಲರೂ ಧಾರೆಗೆ ಅಪ್ಪಣೆ ಕೊಡಬೇಕೆಂದು ಅಲ್ಲಿ ಸೇರಿದ್ದವರನ್ನೆಲ್ಲಾ ಕೇಳುತ್ತಾರೆ. ನಂತರ ಗಂಡನ್ನು ಪೂರ್ವಾಭಿಮುಖವಾಗಿ ಕೂರಿಸಿ ಅವನಿಗೆ ಹಾಲು ನೀರು ಬಿಡುತ್ತಾರೆ. ಗಂಡಿನ ಕೈ ಕೆಳಗೆ ಹೆಣ್ಣು ಬೊಗಸೆ ಒಡ್ಡಿರುತ್ತಾಳೆ. ತನ್ನ ಕೈಗೆ ಬಿಟ್ಟು ಹಾಲು ನೀರನ್ನು ಗಂಡು ಹೆಣ್ಣಿನ ಕೈಗೆ ಬಿಡುತ್ತಾನೆ. ಹೆಣ್ಣು ತನ್ನ ಬೊಗಸೆಯ ಹಾಲು ನೀರನ್ನು ಗಂಡಿನ ಕೈಗೆ ಬಿಡುತ್ತಾಳೆ. ಅನಂತರ ಅವರಿಬ್ಬರನ್ನು ಎಬ್ಬಿಸಿ ಮಧ್ಯೆ ಬಿಳಿಯ ಬಟ್ಟೆಯ ತೆರೆಯನ್ನು ಹಿಡಿಯುತ್ತಾರೆ. ಸುತ್ತ ಇರುವ ನಾಲ್ಕು ಮಡಕೆಗಳ ಸುತ್ತ ನೂಲನ್ನು ಐದು ಸಲ ಸುತ್ತಿರುತ್ತಾರೆ. ಹೆಣ್ಣಿನ ತಾಯಿ ತಟ್ಟೆಯನ್ನು ಹೆಣ್ಣಿನ ತಲೆಯ ಮೇಲೆ ಹಿಡಿಯುತ್ತಾಳೆ. ಮೂವರು ಅಥವಾ ಒಂಬತ್ತು ಜನ ಮುತ್ತೈದೆಯಗು ಗಡಿಗೆಗಳಲ್ಲಿ ತುಂಬಿರುವ ಸುಳ್ನೀರನ್ನು ಎತ್ತಿ ಸೋಬಾನ ಪದಗಳನ್ನು ಹಾಡುತ್ತ ಸ್ವಲ್ಪ ಸ್ವಲ್ಪವಾಗಿ ಹುಯ್ಯುತ್ತಾರೆ. ಹರಿವಾಣದ ಮೇಲೆ ಬಿದ್ದ ನೀರು ಹೆಣ್ಣಿನ ತಲೆಯ ಮೇಲೆ ಬೀಳುತ್ತದೆ. ಅಲ್ಲಿ ನೆರೆದಿರುವ ಹಿರಿಯರೆಲ್ಲರೂ ಸ್ವಲ್ಪ ಸ್ವಲ್ಪ ಹಾಲನ್ನು ಹರಿವಾಣದ ಮೇಲೆ ಸುರಿಯುತ್ತಾರೆ. ಇದೇ ರೀತಿ ಗಂಡನ್ನು ಮಣೆಯ ಮೇಲೆ ಕೂರಿಸಿ ಹಾಲು ತುಪ್ಪ ಹುಯ್ಯುತ್ತಾರೆ. ಇದಾದ ನಂತರ ಎಲೆ, ಅಡಿಕೆ, ಹೂವು, ಹಣ್ಣುಗಳನ್ನು ಇಟ್ಟು ಒಂದು ತಟ್ಟೆಯಲ್ಲಿ ತಾಳಿಯನ್ನು ಇಟ್ಟುಕೊಂಡು ಅದನ್ನು ಎಲ್ಲರಿಂದ ಮುಟ್ಟಿಸಿ ಗಂಡಿನ ಕೈಗೆ ಕೊಡುತ್ತಾರೆ. ಸೂರ್ಯ-ಚಂದ್ರರ ಸಾಕ್ಷಿಯಾಗಿ ಗುರು-ಹಿರಿಯರ ಪಾದಸಾಕ್ಷಿಯಾಗಿ, ನಮ್ಮ ತಂದೆ-ತಾಯಿ ಪಾದಸಾಕ್ಷಿಯಾಗಿ "ನಾನೇ ಗಂಡ ನೀನೇ ಹೆಂಡತಿ" ಎಂದು ಗಂಡ ಹೇಳುತ್ತಾನೆ. ಹಾಗೆಯೇ ಸೂಯ-ಚಂದ್ರರ ಸಾಕ್ಷಿಯಾಗಿ, ಗುರು-ಹಿರಿಯರ ಪಾದಸಾಕ್ಷಿಯಾಗಿ, ನಮ್ಮ ತಂದೆ-ತಾಯಿ ಪಾದಸಾಕ್ಷಿಯಾಗಿ "ನೀನೆ ಗಂಡ ನಾನೆ ಹೆಂಡತಿ" ಎಂದು ಹೆಣ್ಣು ಹೇಳುತ್ತಾಳೆ. ಅನಂತರ ಗಂಡು ತಾಳಿ ಕಟ್ಟುತ್ತಾನೆ. ಈ ಸಮುದಾಯದಲ್ಲಿ ಧಾರೆ ಮುಹೂರ್ತಕ್ಕೆ ಜಂಗಮರನ್ನಾಗಲೀ, ಬ್ರಾಹ್ಮಣರನ್ನಾಗಲೀ ಇವರು ಕರೆಸುವುದಿಲ್ಲ. ಹಟ್ಟಿಯ ಪೂಜಾರಿ ಇಲ್ಲವೇ ದಾಸಯ್ಯಗಳಿಂದ ಮುಹೂರ್ತವನ್ನು ಮಾಡಿಸುತ್ತಾರೆ.

ಧಾರೆ ಮುಹೂರ್ತದ ಸಂದರ್ಭದಲ್ಲಿ ಹಟ್ಟಿಯ ಹಿರಿಯ ಮಹಿಳೆಯರು ಹಾಡುವ ಸೋಬಾನ ಪದಗಳು ತಮ್ಮ ಇಡೀ ಸಮುದಾಯದ ಸಾಂಸ್ಕೃತಿಕ ವೀರರನ್ನು ನೆನೆದು ಹಾಡುವ ತ್ರಿಪದಿಗಳಾಗಿವೆ.

**೩.೧೧.೯ ಬೂವ್ವ ಮಾಡುವ ಶಾಸ್ತ್ರ**

ಮೊಳಕಾಲ್ಮೂರ ತಾಲ್ಲೂಕಿನ ಈ ಕಾಡುಗೊಲ್ಲ ಸಮುದಾಯದಲ್ಲಿ ಬೂವ್ವ ಮಾಡುವ ಶಾಸ್ತ್ರ ಅಥವಾ ಬೂಮ್ಮ ಉಂಬುವುದು (ಊಟ) ನಾನಾರೀತಿಯಲ್ಲಿ ಈ ಗ್ರಾಮೀಣ ಪ್ರದೇಶಗಳಲ್ಲಿ ಇದನ್ನು ಕರೆಯುವರು. ಧಾರೆ ಮುಹೂರ್ತ ಆದ ನಂತರ ಈ ಸಮುದಾಯದವರ ಪವಿತ್ರ ಸ್ಥಳವೆಂದೇ ಗುರುತಿಸಿಕೊಂಡಿರುವ "ಕುರಿಹಟ್ಟಿ"ಯಲ್ಲಿ ಒಲೆಗುಂಡನ್ನು ಹೂಡಿ ಈ ಶಾಸ್ತ್ರವನ್ನು ಮಾಡುವರು. ಇದು ಹೆಣ್ಣಿನ ತವರು ಮನೆಯಲ್ಲಿ ನಡೆಯುವುದಾಗಿದೆ. 'ಬೂವ್ವ' ಎಂದರೆ ಅನ್ನ ಎಂದರ್ಥ. ಗಂಡಿನ ಕಡೆಯವರು ಮೂರು ಸೇರು ಅಕ್ಕಿ ಒಂದು ಸೇರು ತುಪ್ಪ ಹಾಗೆಯೇ ಹೆಣ್ಣಿನ ಕಡೆಯರು ಎರಡು ಸೇರು ಅಕ್ಕಿ ಒಂದು ಸೇರು ತುಪ್ಪ ಇದನ್ನೆಲ್ಲಾ ತೆಗೆದುಕೊಂಡು ಹೊಸ ಗಡಿಗೆಯಲ್ಲಿ ಪೂಜೆ ಮಾಡಿ 'ಬಾಯಿಬತದ' (ಬಾಯಿಗೆ ಬಟ್ಟೆ ಕಟ್ಟಿಕೊಂಡು) ಮೂಲಕ ಮಡಿಯಿಂದ ತಯಾರಿಸುವರು. ಅನ್ನ ಬೆಂದ ನಂತರ ಮಡಿವಾಳರು ಕೊಟ್ಟ ಬಿಳಿಪಂಚೆಯ ಮೇಲೆ ಹಾಕಿ ತೆಂಗಿನ ಕಾಯಿ, ಬಾಳೆಹಣ್ಣು, ಬೆಲ್ಲ, ತುಪ್ಪ, ಜೇನುತುಪ್ಪ ಎಲ್ಲವನ್ನೂ ಸೇರಿಸಿ ಅನ್ನವನ್ನು ಮಿದ್ದು ಐದು ದೊಡ್ಡ ಮುದ್ದೆಗಳನ್ನು ಪಿರಮಿಡ್ ಆಕಾರಗಳಾಗಿ ತಯಾರಿಸಿ ತಲಾ ಒಂದೊಂದನ್ನು ಪ್ರತ್ಯೇಕ ತಟ್ಟೆಯಲ್ಲಿಟ್ಟುಕೊಂಡು, ತಮ್ಮ ದೇವಸ್ಥಾನದ ಹತ್ತಿರ ಒಂದು ಕರಿಕಂಬಳಿ ಗದ್ದಿಗೆಯ ಮೇಲೆ ಇಟ್ಟು ಪೂಜಾರಿ ಕರಿಕಂಬಳಿ ಗದ್ದುಗೆಗೆ ಪೂಜೆ ಮಾಡುವನು. ವಧು-ವರರನ್ನು ಪಕ್ಕದಲ್ಲಿಯೇ ಕುಳ್ಳಿಸಿರುತ್ತಾರೆ. ಹೆಣ್ಣಿನ ಕಡೆಯವರು ಎರಡು ಮುದ್ದೆ, ಗಂಡಿನ ಕಡೆಯವರು ಎರಡು ಮುದ್ದೆಗಳನ್ನು ಹಂಚಿಕೊಂಡು ಜೋರಾಗಿ ತಿನ್ನಬೇಕು ಯಾರು ಮೊದಲಿಗೆ ತಿಂದು ತಟ್ಟೆಯನ್ನು ಬಾರಿಸುತ್ತಾರೋ ಅವರೇ ಗೆದ್ದ ಹಾಗೆ. ಇದರಲ್ಲಿ ಮೂರು ವಿಧ. 'ತಾಯಿ ಮುದ್ದೆ ಬೂವ್ವ', 'ಬಳಗದ ಮುದ್ದೆಯ ಬೂವ್ವ', 'ಗೌಡನ ಮುದ್ದೆ' ಎಂದು ಕರೆಯುವರು.

ಈ ಗೌಡನ ಮುದ್ದೆಗೆ ಹಟ್ಟಿಗೌಡ ಬಂದು (ಉಂಗುರದಿಂದ) ಮುದ್ರೆ ಒತ್ತಿದ ಬಳಿಕ ಪೂಜೆ ಮಾಡಿ ಅದನ್ನು ಸಹ ಎಲ್ಲರೂ ತಿನ್ನುತ್ತಾರೆ.

ಈ ಬೂವ್ವ ಮಾಡುವ ಶಾಸ್ತ್ರವನ್ನು ಈ ಸಮುದಾಯ ಚಾಚೂ ತಪ್ಪದೆ ಮಾಡುತ್ತದೆ.

### ೩.೧.೧೦ ಮನೆದುಂಬಿಕೆ ಶಾಸ್ತ್ರ

ಧಾರೆ ಮುಹೂರ್ತ ಮುಗಿದ ನಂತರ ಮೊದಲಿಗೆ ಹೆಣ್ಣಿನ ಮನೆಯಲ್ಲಿ ಈ ಶಾಸ್ತ್ರ ನಡೆಯುತ್ತದೆ. ಅಂದೇ ಸಾಯಂಕಾಲ ಆಗುವುದಕ್ಕಿಂತ ಮುಂಚಿತವಾಗಿ ಗಂಡಿನ ಮನೆಯಲ್ಲಿ ಬಂದಾಗ ಗಂಡನ ತಂಗಿ ಅಣ್ಣ-ಅತ್ತಿಗೆಯ ಕಾಲನ್ನು ತೊಳೆದು ಅಣ್ಣನನ್ನು ತಂಗಿ ಹೆಣ್ಣು ಕೊಡಲು ಕೇಳಿದಾಗ ಅಣ್ಣ ವಿಧ ವಿಧವಾದ ವಸ್ತುಗಳನ್ನು ಕೇಳುವುದು ನಂತರ ತಂಗಿ ಪಾದ ಬಿಡದೇ ಹೆಣ್ಣು ಕೊಡುತೀನಿ ಅನ್ನುವವರೆಗೂ ನಡೆಯುವ ಮಾತುಕತೆ ಅತ್ಯಂತ ಮನಮೋಹಕವಾದದ್ದು ಜೊತೆಗೆ ಹೆಣ್ಣು ತನ್ನ ತವರು ಮನೆಯ ಮೇಲೆ ಇರುವಂತಹ ಹಂಬಲ, ಪ್ರೀತಿಯನ್ನು ನಾವು ಇಲ್ಲಿ ಕಾಣಬಹುದು. ಕೊನೆಗೆ ಅಣ್ಣ ಹೆಣ್ಣು ಕೊಡುತ್ತೀನಿ ಎಂದು ಹೇಳಿದ ಮೇಲೆ ಮದುವಣಗಿತ್ತಿಯನ್ನು ಮನೆಯ ಒಳಗೆ ಕರೆದುಕೊಳ್ಳುವಾಗ ಗಂಡ ಹೆಂಡತಿಗೆ ಕೊಟ್ಟ ಅಕ್ಷತೆಯನ್ನು "ನಮ್ಮ ಅತ್ತೆ ಮಾವರ ಮನೆ ಹಾಲುಕ್ಕಿದಂತೆ ಉಕ್ಕಲಿ" ಎಂದು ಹೇಳಿ ಅಕ್ಷತೆಯನ್ನು ತಟ್ಟೆಯಲ್ಲಿ ಹಾಕುತ್ತಾಳೆ. ಅನಂತರ ಗಂಡ ಹೆಂಡತಿಯ ಇಬ್ಬರ ಎಡ-ಬಲ ಕಾಲುಗಳ ಹೆಬ್ಬೆರಳ ಸಂದಿಯಲ್ಲಿ ಮಳೆಯನ್ನು ಮುಖ್ಯದ್ವಾರದ ವಸಲಿ ಕೊಠಡಿಗೆ ಬಡಿಯುವುದು. ನಂತರ ಮದುವಣಗಿತ್ತಿಯನ್ನು ಅತ್ತೆಯ ಮನೆಯವರು ಈ ರೀತಿಯಾಗಿ ಮನೆದುಂಬಿಸಿಕೊಳ್ಳುವರು.

ಅನಂತರ ಅತ್ತೆಯ ಕೆಲಸವನ್ನು ಸೊಸೆಗೆ ಹಸ್ತಾಂತರಿಸುವ ಗುರುತಾಗಿ ಇಲ್ಲಿ ಬಾಗಿಲ ಬಳಿಯಲ್ಲಿ ಒಂದು ಗೂಟವನ್ನು ನೆಟ್ಟು ಹೊಸ ಮಡಿಕೆಯಲ್ಲಿ ಮೊಸರನ್ನು ಮತ್ತು ಒಂದು ಚಂಬು ನೀರನ್ನು ಹಾಕಿ ಕಡೆಗೋಲನ್ನು ಇಡುತ್ತಾರೆ. ಚಿಗಳಿ, ತಂಬಿಟ್ಟು, ಹಣ್ಣು, ಕಾಯಿ ಇಟ್ಟು ಪೂಜೆ ಮಾಡಿ ಸೊಸೆಯ ಕೈಯಿಂದ ಅತ್ತೆ ಮಡಿಕೆಯ ಪಕ್ಕದಲ್ಲಿ ನಿಂತುಕೊಂಡು ಮೊಸರು ಕಡೆಸುವುದು, ನಂತರ ಇನ್ನೊಂದು ಸೋರೆಯಲ್ಲಿ ಬಂದ ಮಜ್ಜಿಗೆಯನ್ನು ಹಾಕಿಕೊಂಡು ಮಾರುವುದಕ್ಕೆ ಹೋಗುವಳು ಅನಂತರ ಅವಳ ಹಿಂದೆ ಹಟ್ಟಿಯ ಹಿರಿಯ ಮಹಿಳೆಯರು ಕೃಷ್ಣನ ಮೇಲಿನ ಪದಗಳನ್ನು ಹಾಡುತ್ತಾ ಅವಳ ಹಿಂದೆ ಹೋಗುವುದು.

ಈ ರೀತಿಯಾಗಿ ಮಾಡುವುದು ತಮ್ಮ ಬುಡಕಟ್ಟು ಸಮುದಾಯದ ಮೂಲ ಕಸುಬಾದ ಪಶುಪಾಲನೆಯನ್ನು ಗುರುತಿಗೆ ತರುವಂತದ್ದು ಮತ್ತು ಅತ್ತೆಯು ತನ್ನ ಕೆಲಸವನ್ನು ಸೊಸೆಗೆ ಹಸ್ತಾಂತರಿಸುವ ಸಂಕೇತವಾಗಿದೆ.

ಮರುದಿನ ಹತ್ತಿರ ವಿರುವ ಕೆರೆ, ಬಾವಿ, ಇಲ್ಲವೇ ನೀರಿನ ಟ್ಯಾಂಕ್ ಬಳಿ ಹೋಗಿ ಐದು ಜನ ಮುತ್ತೈದೆಯರ ಜೊತೆಯಲ್ಲಿ ಗಂಗೆ ಪೂಜೆಯನ್ನು ಮಾಡಿಕೊಂಡು ಹೊಸ ಕೊಡದಲ್ಲಿ ನೀರು ತುಂಬಿ ಪೂಜೆ ಮಾಡಿಕೊಂಡು ಅದನ್ನು ಮದುವಣಗಿತ್ತಿ ತಲೆಯ ಮೇಲೆ ಹೊತ್ತುಕೊಂಡು ಬಾಗಿಲ ಬಳಿಯಲ್ಲಿ ಬಂದಾಗ, ಗಂಡ ಅದಕ್ಕೆಲ್ಲಾ ಪೂಜೆ ಮಾಡಿ ಒಂದು ರೂಪಾಯಿ ಇಲ್ಲವೆ ಐದು ರೂಪಾಯಿ ದಕ್ಷಿಣವನ್ನು ಕೊಡದಲ್ಲಿ ಹಾಕಿ ಇಳಸಿಕೊಂಡು ಮನೆಯ ಒಳಗೆ ಹೋಗುವನು. ಇಲ್ಲಿಗೆ ಗಂಗಾದೇವತೆಯ ಶಾಸ್ತ್ರವು ಮುಗಿಯುತ್ತದೆ. ಈ ರೀತಿಯಾಗಿ ಕಾಡುಗೊಲ್ಲ ಸಮುದಾಯವು ಇಂದಿನ ಜಾಗತಿಕ ಸಂದರ್ಭದಲ್ಲಿಯೂ ಸಹ ಈ ರೀತಿಯ ವಿವಾಹದ ಶಾಸ್ತ್ರಗಳು ಮಾಡುವುದನ್ನು ನೋಡಿದರೆ ಅವರು ಇಂದಿಗೂ ಸಹ ತಮ್ಮ ಬುಡಕಟ್ಟಿನ ಲಕ್ಷಣಗಳನ್ನು ಉಳಿಸಿಕೊಂಡು ಬಂದಿರುವುದು ನಮಗೆ ವೇದ್ಯವಾಗುತ್ತದೆ.

### ೩.೧.೧೧ ಸಾವು (ಶವಸಂಸ್ಕಾರ)

ಮಾನವನ ಜೀವನದಲ್ಲಿ ಇದು ಕೊನೆಯ ಘಟ್ಟವಾಗಿದೆ. ಮನುಷ್ಯರು ಮರಣವನ್ನಪ್ಪಿದ ಬಳಿಕ ಹಲವಾರು ವಿಧಿ ವಿಧಾನಗಳನ್ನು ಅನುಸರಿಸುವರು. ಆದರೆ ಇದು ಒಂದು ಸಮುದಾಯದಿಂದ ಇನ್ನೊಂದು ಸಮುದಾಯಕ್ಕೆ ಭಿನ್ನವಾಗಿರುತ್ತದೆ. ನಮ್ಮ ಹಿಂದೂ ಸಂಪ್ರದಾಯದಲ್ಲಿ ಕೆಲವೊಂದು ಜಾತಿಗಳ ವ್ಯಕ್ತಿ ಸತ್ತ ನಂತರ ಸುಡುತ್ತಾರೆ. ಇನ್ನು ಕೆಲವು ಜಾತಿಯವರು ಹೆಣವನ್ನು ಮನೆಯಿಂದ ಹೊರಗಿಟ್ಟು ಹೂಳುವುದನ್ನು ನಾವು ಕಾಣಬಹುದು.

ಮನುಷ್ಯ "ಕೋಟಿಗೆ ಬಾಳಿದರೂ ಕಾಡಿಗೆ (ಸ್ಮಶಾನಕ್ಕೆ) ಹೋಗುವುದು ತಪ್ಪಲ್ಲ" ಎಂಬ ಗಾದೆ ಮಾತಿನಂತೆ ಅವರು ಎಷ್ಟೇ ಶ್ರೀಮಂತರಿರಲಿ, ಬಡವರಿರಲಿ, ವಿದ್ಯಾವಂತರಿರಲಿ, ಎಲ್ಲರೂ ಸಹ ಸಾವಿನ ಮುಂದೆ ಶರಣು. ಸಾವಿನ ಸಂದರ್ಭವನ್ನು ಹೊರತುಪಡಿಸಿ ಉಳಿದ ಸಂದರ್ಭದಲ್ಲಿ ಅಂದರೆ ಹಬ್ಬ-ಹರಿದಿನ, ಮದುವೆ ಮುಂತಾದ ಸಮಯಗಳಲ್ಲಿ ಕೆಲವೊಂದು ಪದ್ಧತಿಗಳನ್ನು ಬಿಟ್ಟು ಆಚರಿಸಿದರೆ ನಡೆಯುತ್ತದೆ. ಆದರೆ ಇಲ್ಲಿ ವ್ಯಕ್ತಿಯ ಮರಣದ ಸಂದರ್ಭದಲ್ಲಿ ಮಾತ್ರ ಯಾವುದೇ ಪದ್ಧತಿ ಅಥವಾ ಸಂಪ್ರದಾಯಗಳನ್ನು ಕೈಬಿಡದೆ ಎಲ್ಲವನ್ನೂ ಅನುಚೂನವಾಗಿ ಆಚರಿಸುವುದು ಪ್ರಮುಖವಾಗುತ್ತದೆ. ಏಕೆಂದರೆ ಸಾವಿನ ನಂತರದಲ್ಲಿರುವ ದೆವ್ವ, ಭೂತಗಳ ಕಲ್ಪನೆ ನಮ್ಮನ್ನು ಈ ರೀತಿಯಾಗಿ ಮಾಡಲು ತೊಡಗಿಸುತ್ತದೆ.

ಪ್ರತಿಯೊಂದು ಸಮುದಾಯವೂ ಸಹ ತಮ್ಮದೇ ಆದಂತಹ ವಿಧಿ-ವಿಧಾನಗಳನ್ನು ಸಾವಿನ ಸಂದರ್ಭಗಳಲ್ಲಿ ಅನುಸರಿಸುವುದನ್ನು ನಾವು ಕಾಣಬಹುದು. ಅಂದರೆ ಯಾವುದೇ ಒಂದು ಸಮುದಾಯವನ್ನು ತೆಗೆದುಕೊಂಡರೆ ಅಲ್ಲಿ ಚಿಕ್ಕಮಕ್ಕಳು ಸತ್ತರೆ, ಮಧ್ಯಮ ವಯಸ್ಸಿನವರು ಸತ್ತರೆ ಇದೇ ರೀತಿ ಹಿರಿಯ ವಯಸ್ಸಿನವರು ಸತ್ತಾಗ ಅನುಸರಿಸುವ ವಿಧಿ-ವಿಧಾನಗಳು ಬೇರೆ ಬೇರೆಯಾಗಿರುವುವು.

ಇದೇ ರೀತಿಯಲ್ಲಿ ಈ ಕಾಡುಗೊಲ್ಲ ಸಮುದಾಯದಲ್ಲಿಯೂ ಸಹ ವ್ಯಕ್ತಿಗಳು ಸಾವನ್ನಪ್ಪಿದಾಗ ಅನುಸರಿಸುವ ವಿಧಿ-ವಿಧಾನಗಳು ಇತರ ಸಮುದಾಯದವರಿಗಿಂತಲೂ ಭಿನ್ನ ಅದರಲ್ಲಿ ಗರ್ಭಿಣಿ ಮಹಿಳೆ ಸತ್ತಾಗ ಆಚರಿಸುವಂತಹ ವಿಧಿಗಳು ವಿಚಿತ್ರವಾಗಿದ್ದರೂ ಸಹ ಸತ್ಯ ಎಂಬುದನ್ನು ನಾವು ಈ ಮಹಿಳೆಯ ಶವಸಂಸ್ಕಾರವನ್ನು ವೀಕ್ಷಿಸಿದಾಗ ನಮಗೆ ವೇದ್ಯವಾಗುತ್ತದೆ.

ಸಾಮಾನ್ಯವಾಗಿ ಕಾಡುಗೊಲ್ಲರಲ್ಲಿ ಸತ್ತವರನ್ನು ಹೂಳುವ ಪದ್ಧತಿ ಇದೆ. ಆದರೆ ಗರ್ಭಿಣಿ, ಬಾಣಂತಿ, ಆತ್ಮಹತ್ಯೆ, ದುರ್ಮರಣಕ್ಕೀಡಾಗಿ ಸತ್ತವರನ್ನು ಚಿತೆಗೇರಿಸುವ ಸಂಪ್ರದಾಯವಿದೆ.

ಹಿಂದಿನ ಪೂರ್ವ ಕಾಲದಲ್ಲಿ ಸತ್ತವರನ್ನು ಮಣ್ಣು ಮಾಡಿದ ಅಥವಾ ಚಿತೆಗೇರಿಸಿದ ನಂತರ ಮೂರನೇ ದಿನದ ಕಾರ್ಯಕ್ಕೆ ಬಂಧು-ಬಳಗದವರಿಗೆ ಸುದ್ದಿಯನ್ನು ತಿಳಿಸುವ ಪರಿಪಾಠವಿತ್ತು. ಆದರೆ ಅದು ಈಗ ಸಂಪೂರ್ಣ ಬದಲಾಗಿದೆ. ಸತ್ತ ವ್ಯಕ್ತಿಗಳ ಮುಖವನ್ನು ಮತ್ತೆ ನೋಡಲಾಗುವುದಿಲ್ಲವೆಂದು ಅವರನ್ನು ಮಣ್ಣು ಮಾಡುವುದಕ್ಕಿಂತ ಮುಂಚಿತವಾಗಿಯೇ "ಹೊರದಾಸರು" ಅಥವಾ "ಮಣೆಗಾರರು" ಎಂದು ಕರೆಯಲ್ಪಡುವ ಮಾದಿಗರೇ ಸಾವಿನ ಸುದ್ದಿಯನ್ನು ಬಂಧು-ಬಳಗದವರಿಗೆ ತಲುಪಿಸುವ ಕಾರ್ಯವನ್ನು ಮಾಡುತ್ತಾರೆ. ಆದರೆ ಯಾವುದೇ ಕಾರಣಕ್ಕೂ ಈ ಮಣೆಗಾರರನ್ನು ಹಟ್ಟಿಯೊಳಗೆ ಸೇರಿಸಿಕೊಳ್ಳುವುದಿಲ್ಲ.

ಮಹಿಳೆ ಮರಣವನ್ನಪ್ಪಿದ ಸಂದರ್ಭದಲ್ಲಿ ಸತ್ತ ತಕ್ಷಣ ಅವಳನ್ನು ಮನೆಯಿಂದ ಹೊರಗಡೆ ತಂದು ಸಾಬೂನಿಂದ ಮೈತೊಳೆದು ಹಳೆಯ ಮಡಿಬಟ್ಟೆಗಳನ್ನು ಉಡಿಸಿ ಶವವನ್ನು ತಂದು ಮನೆಯ ಮುಂದಿನ ಜಗಲಿಯಲ್ಲಿ ಮಲಗಿಸಿ ಕುಂಕುಮ ಇಟ್ಟು, ಹಣೆಗೆ ವಿಭೂತಿಯನ್ನು ಹಚ್ಚಿ, ಎಲೆ ಅಡಿಕೆಯನ್ನು ಹಾಕುವ ಮಹಿಳೆಯಾಗಿದ್ದರೆ, ಆಕೆಯ ಅಂತಿಮ ಆಸೆ ನೆರವೇರಲಿ ಎಂದು ಎಲೆ, ಅಡಿಕೆ, ಕುಟ್ಟಿ ಬಾಯಿಯಲ್ಲಿ ಇಡುತ್ತಾರೆ. ಮಣೆಗಾರರು ಸಾವಿನ ಸುದ್ದಿಯನ್ನು ತಲುಪಿಸಿ ಬಂದ ನಂತರ ಈ ಮಹಿಳೆಯ ಗಂಡ ಮತ್ತು ಮಕ್ಕಳು ಅವರೇ ಚಟ್ಟವನ್ನು ಸಿದ್ಧಪಡಿಸುವರು. ಇಲ್ಲಿ ಸಿದ್ಧಪಡಿಸುವಾಗ ಹಾಲು ಒಸರುವಂತಹ ಕಳ್ಳಿಕಟ್ಟಿಗೆಯನ್ನು ಬಳಸಲೇಬೇಕೆಂಬ ನಿಯಮ ಇರುವುದರಿಂದ ಅದನ್ನು ಖಡ್ಡಾಯವಾಗಿ ಅನುಸರಿಸುವರು.

ಚಿಕ್ಕ ಬಾಲೆಯರೇನಾದರೂ ಮೃತಪಟ್ಟರೆ ಕೈಯಲ್ಲಿಯೇ ಎತ್ತಿಕೊಂಡು ಹೋಗಿ ಮಣ್ಣು ಮಾಡುವರು. ಇತರೆ ವಯಸ್ಸಿನವರೇನಾದರೂ ಸಾವನ್ನಪ್ಪಿದ್ದರೆ ಅವರನ್ನು ಚಟ್ಟದ ಮೇಲೆ ಮಲಗಿಸಿಕೊಂಡು ಹೋಗುತ್ತಾರೆ. ಇಲ್ಲಿ ಚಟ್ಟವನ್ನು ಹೊರುವಾಗ ಈ ಮಹಿಳೆಯ ಮಕ್ಕಳು ಮತ್ತು ಗಂಡ ಬದುಕಿದ್ದರೆ ಅವರೇ ಹೊರುವರು.

ಶವವನ್ನು ತೆಗೆದುಕೊಂಡು ಹೋಗುವಾಗ ಅವರವರ ಆರ್ಥಿಕ ಸ್ಥಿತಿಗೆ ತಕ್ಕಂತೆ ಮಣ್ಣು ಮಾಡುವರು. ಅಂದರೆ ಹಿಂದಿನ ದಿನಗಳಲ್ಲಿ ಉರುಮೆ ಬಡಿಸಿಕೊಂಡು ಹೋಗುತ್ತಿದ್ದರು. ಆದರೆ ಇಂದು ಬ್ಯಾಂಡ್, ಭಜಂತ್ರಿ, ಪಟಾಕಿ ಬಿಡುವುದರ ಮೂಲಕ ಶವಕ್ಕೆ ಹಣವನ್ನು ಚಿಲ್ಲರೆ, ಎರಚುತ್ತಾ ಎಲೆ, ಅಡಿಕೆ, ಮಂಡಕ್ಕಿಯನ್ನು ಇನ್ನು ಕೆಲವರು ರಾಗಿ ಎಸೆಯುವುದರ ಮೂಲಕ ಶವಸಂಸ್ಕಾರವನ್ನು ಮಾಡುವರು. ಇಲ್ಲಿ ಶವವನ್ನು ಕುಣಿಯ ಸುತ್ತಲೂ ಮೂರು ಸಲ ಪ್ರದಕ್ಷಿಣೆಯನ್ನು ಹಾಕಿ ಇಳಿಸಿ ತಲೆ ಪೂರ್ವಕ್ಕೆ ಕಾಲುಗಳು ಪಶ್ಚಿಮಕ್ಕೆ ಮಾಡಿ ಸಮಾದಿಯಲ್ಲಿ ಇಳಿಸುತ್ತಾರೆ.

ಎಲ್ಲರೂ ತುಗಡಿಗಿಡದ ಸೊಪ್ಪನ್ನು ಹಾಕಿ ಮೂರು ಹಿಡಿ ಮಣ್ಣನ್ನು ಹಾಕುವರು. ನಂತರ ಪೂರ್ತಿ ಮುಚ್ಚಿ ಮಣ್ಣಿನ ಗುಡ್ಡೆ ಹಾಕುವರು. ಇದರಲ್ಲಿ ಮದುವೆಯಾದವರನ್ನು ಮುಖ ಮೇಲಕ್ಕೆ ಮಾಡಿ ಮಲಗಿಸಿದರೆ, ಮದುವೆಯಾಗದವರನ್ನು ಮುಖ ನೆಲಕ್ಕೆ ಮಾಡಿ ಬೋರಲು ಹಾಕುವರು. ಇಲ್ಲಿ ಕೆಲವರು ಸ್ಮಶಾನದಲ್ಲಿ ಹೂಳಿಸಿದರೆ, ಇನ್ನು ಕೆಲವು ಜಮೀನಿರುವಂತವರು ತಮ್ಮ ಹೊಲಗಳಲ್ಲಿಯೇ ಹೂಳಿಸುವರು.

ಹಿಂದಿನ ಕಾಲದಲ್ಲಿ ಗರ್ಭಿಣಿ ಮಹಿಳೆ ಸತ್ತರೆ, ಅವಳನ್ನು ಕಂಬಳಿ ಅಥವಾ ಗೋಣಿಚೀಲದ ಜೋಲಿನಲ್ಲಿ ತೆಗೆದುಕೊಂಡು ಸ್ಮಶಾನಕ್ಕೆ ಹೋಗಿ ಅಲ್ಲಿ ಒಂದೇ ಚಿತೆಯಲ್ಲಿ ಎರಡು ಜೀವಿಗಳ ಸಂಸ್ಕಾರ ನಡೆಯಬಾರದು ಒಂದು ವೇಳೆ ನಡೆದರೆ ಹಟ್ಟಿಗೆ ದರಿದ್ರ ವಕ್ಕರಿಸುತ್ತದೆ. ಅಥವಾ ಭೂತವಾಗಿ ಕಾಡುತ್ತದೆ ಎಂದು ಅವಳ ಹೊಟ್ಟೆಯನ್ನು ಬಗೆದು, ಮಗು ಮತ್ತು ತಾಯಿಯನ್ನು ಬೇರೆ ಬೇರೆಯಾಗಿಸಿ ಚಿತೆಗೇರಿಸುವ ಸಂಪ್ರದಾಯವಿತ್ತೆಂದು ನನ್ನ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ತಿಳಯಿತು.

ಇತ್ತೀಚಿನ ದಿನಗಳಲ್ಲಿ ಗರ್ಭಿಣಿ ಹೆಣ್ಣು ಸತ್ತರೆ ಅವಳನ್ನು ಸ್ಮಶಾನಕ್ಕೆ ತೆಗೆದುಕೊಂಡು ಹೋಗಿ ಆಕೆಯ ಹೊಟ್ಟೆಯ ಮೇಲೆ ಬಾಳೆ ಎಲೆಯನ್ನು ಇಟ್ಟು ಅದನ್ನು ಎರಡು ಭಾಗವಾಗಿ ಮಾಡುತ್ತಾರೆ. ಈ ರೀತಿಯ ಆಚರಣೆ ಹೊಟ್ಟೆಯಲ್ಲಿರುವ ಮಗುವನ್ನು ಹೊರ ತೆಗೆಯುವ ಸಾಂಕೇತಿಕ ವಿಧಿಯಾಗಿದೆ.

ಒಂದು ವೇಳೆ ಗರ್ಭಿಣಿ ಹೆರಿಗೆಯಾಗದೆ ಆಸ್ಪತ್ರೆಯಲ್ಲಿ ಸತ್ತರೆ, ಆತ್ಮಹತ್ಯೆ ಮಾಡಿಕೊಂಡು ಸತ್ತರೆ, ಅಪಘಾತ ಸಂಭವಿಸಿ ಸತ್ತರೆ ಇವರನ್ನೆಲ್ಲಾ ಹಟ್ಟಿಯಿಂದ ಹೊರಗಡೆ ಇಟ್ಟು ಸುಡುವ ಸಂಪ್ರದಾಯವಿದೆ.

ಈ ರೀತಿಯಾಗಿ ಕಾಡುಗೊಲ್ಲ ಸಮುದಾಯದಲ್ಲಿ ಮಹಿಳೆಯು ಸತ್ತಂತ ಸಂದರ್ಭದಲ್ಲಿ ಅನುಸರಿಸುವ ಸಂಪ್ರದಾಯವಾಗಿದೆ.

### ೩.೧.೧೨ ಸಮುದಾಯದಲ್ಲಿ ವಿಧವೆ ಮಹಿಳೆಯ ಪಾತ್ರ

ಗೊಲ್ಲರ ಹಟ್ಟಿಯಲ್ಲಿ ಯಾರಾದರೂ ಸತ್ತಾಗ ಈ ಸಮುದಾಯದ ವಿಧವೆ ಮಹಿಳೆಯ ಪಾತ್ರ ತುಂಬಾ ಪ್ರಮುಖವಾದುದು. ವ್ಯಕ್ತಿ ಸತ್ತಂತ ಸಂದರ್ಭದಲ್ಲಿ ಅವರ ಮಕ್ಕಳು ತಂದ ಹೊಸ ಗಡಿಗೆಯಲ್ಲಿ ನೀರನ್ನು ಆರು ಹಿಡಿ ಅಕ್ಕಿಯನ್ನು ಹಾಕಿ ಬೆರಣಿಯನ್ನು ತೆಗೆದುಕೊಂಡು ಒಲೆ ಹೂಡಿ ಅದರ ಮೇಲೆ ಅನ್ನವನ್ನು ಮಾಡುತ್ತಾಳೆ.

ಮೂರನೆ ದಿನದ ಕಾರ್ಯಕ್ರಮವನ್ನು ಮಾಡುವಾಗ ಮೊದಲನೆಯ ದಿನ ಶವದ ಮೇಲಿಡುವ ಮಡಕೆಯಲ್ಲಿ ಅನ್ನವನ್ನು ಮಾಡಿದ ವಿಧವೆಯನ್ನು ಕರೆಸಿ ಪುನಃ ಕುಂಬಾರರ ಮನೆಯಿಂದ ತರಿಸಿದ ಹೊಸ ಗಡಿಗೆಯಲ್ಲಿ ಅಂಗೈಯಿಂದ ಮೂರು ಸಲ, ಮುಂಗೈಯಿಂದ ಮೂರು ಸಲ ಅಕ್ಕಿಯನ್ನು ನೀರು ತುಂಬಿದ ಗಡಿಗೆಯಲ್ಲಿ ಹಾಕಿ ಒಲೆ ಹೂಡಿ ಅಡಿಗೆ ಮಾಡಿ ಅನ್ನವನ್ನು ಒಂದು ದೊಡ್ಡ ಬಿದಿರು ಮೊರಕ್ಕೆ ಸುರಿಯುತ್ತಾಳೆ. ಅಂದು ಕ್ಷೌರಿಕನನ್ನು ಕರೆಯಿಸಿ ಹೆಣವನ್ನು ಹೊತ್ತ ಇಬ್ಬರು ವ್ಯಕ್ತಿಗಳಿಗೆ ಕ್ಷೌರ ಮಾಡಿಸಿ ನೀರು ಹಾಕಿದ ಮೇಲೆ, ಅಗಸರವನು ಬಂದು ಗೋಗಂಜನ್ನು ಚಿಮುಕಿಸಿ ಕುಡಿಸುವನು. ವಿಧವೆ ಬಿದಿರು ಮೊರದಲ್ಲಿ ಹಾಕಿದ ಅನ್ನದಲ್ಲಿ ಮೊಸರನ್ನು ಕಲಿಸಿ ಅದನ್ನು ಸಮಾಧಿಯ ಬಳಿಗೆ ತೆಗೆದುಕೊಂಡು ಹೋದಾಗ, ಅವಳ ಹಿಂದೆಯೇ ಹಟ್ಟಿಯವರೆಲ್ಲರೂ ಹೋಗುತ್ತಾರೆ. ಸಮಾಧಿ ಸ್ವಲ್ಪದೂರವಿದೆ ಎನ್ನುವಾಗ ಕೈಯಲ್ಲಿ ಇರುವ ಬಿದಿರು ಮೊರವನ್ನಿಟ್ಟು, ಕಾಯಿ ಒಡೆದು, ಊದುಭತ್ತಿ ಹಚ್ಚಿ ಅದಕ್ಕೆ ಪೂಜೆ ಮಾಡುವಲ್ಲಿ ಇವಳ ಪಾತ್ರ ಪ್ರಮುಖವಾಗಿದೆ.

ಹೆಣ ಹೊತ್ತವರನ್ನು ಹಟ್ಟಿಯೊಳಕ್ಕೆ ಸೇರಿಸುವ ಮೊದಲು ಸೂತಕವನ್ನು ಕಳೆಯುವುದಕ್ಕಾಗಿ ಒಂದು ಸಂಪ್ರದಾಯವನ್ನು ಆಚರಿಸುವರು. ಕಾಗೆಗೆ ಇಡಲು ಬೇಕಾದ ಅನ್ನವನ್ನು ಮಾಡಿದ ವಿಧವೆ ಪುನಃ ಒಂದು ಸೇರು ಅಕ್ಕಿಯನ್ನು ಮಡಕೆಯಲ್ಲಿ ಹಾಕಿ ಅನ್ನ ಮಾಡುತ್ತಾಳೆ. ಎರಡು ತುದಿಗಳಲ್ಲಿಯೂ ಬಳೆ ಹಾಕಿರುವ ಒಂದು ಒನಕೆಯನ್ನು ಒಂದು ಬಟ್ಟಲು ಹರಳೆಣ್ಣೆಯನ್ನು ಒಂದು ಕೋಳಿಯ ಪುಕ್ಕವನ್ನು ತರುತ್ತಾಳೆ. ಒನಕೆಗೆ ಸುಣ್ಣವನ್ನು, ಕೆಮ್ಮಣ್ಣನ್ನು ಬಳಿದು ಹೆಣ ಹೊತ್ತ ಇಬ್ಬರಲ್ಲಿ ಒಬ್ಬರಿಗೊಬ್ಬರು ಹರಣೆಯನ್ನು ಕೋಳಿ ಪುಕ್ಕದಿಂದ ಭುಜಕ್ಕೆ ಸವರಿಕೊಂಡು "ಹೆಣ ಹೊತ್ತ ನಾನು ಭಾರ ಇಳಿಸಿಕೊಂಡೆ ಎಂದು ಒಬ್ಬರ ನಂತರ ಒಬ್ಬರು ಆದ ಮೇಲೆ ವಿಧವೆ ಭಾರ ಇಳಿಸಿಕೊಂಡ ಅವರಿಬ್ಬರಿಗೂ ಊಟಕ್ಕೆ ಬಡಿಸಿ ತಾನೂ ಊಟ ಮಾಡುತ್ತಾಳೆ".

ಈ ರೀತಿಯಲ್ಲಿ ಸತ್ತವರ ಮನೆಯ ಸೂತಕವನ್ನು ಕಳೆಯುವಲ್ಲಿ ಮಹಿಳೆಯ ಪಾತ್ರ ಗಣನೀಯವಾದುದಾಗಿದೆ.

ಕಾಡುಗೊಲ್ಲ ಸಮುದಾಯದಲ್ಲಿ ಗಂಡ ಏನಾದರೂ ತೀರಿಕೊಂಡರೆ ಹೆಣದ ಜೊತೆಗೆ ಹೆಂಡತಿಯನ್ನು ಕುಳ್ಳಿರಿಸಿ ಹೊಸಬಟ್ಟೆ ಉಡಿಸಿ ಉಡಿ ತುಂಬಿ ಮುತ್ತೈದೆ ತನವನ್ನು ವೈಭವೀಕರಿಸುತ್ತಾರೆ.

ಶವವನ್ನು ಸ್ಮಶಾನಕ್ಕೆ ತೆಗೆದುಕೊಂಡು ಹೋಗುವ ಸಂದರ್ಭದಲ್ಲಿ ಹೆಂಡತಿಯೂ ಸಹ ಹಿಂದೆ ಹೋಗುವಳು. ಬೇರೆ ಸಮುದಾಯದವರಾದರೆ ಹೆಣದ ಕುಣಿಯಲ್ಲಿಯೇ ತಮ್ಮ ಮುತ್ತೈದೆ ತನವನ್ನು ತೆಗೆಯುತ್ತಾರೆ. ಆದರೆ ಮೊಳಕಾಲ್ಮುರು ತಾಲ್ಲೂಕಿನ ಈ ಪ್ರದೇಶದ ಕಾಡುಗೊಲ್ಲ ಮಹಿಳೆಯರು ಕೈಗೆ ಹಾಕಿದ ಬಳೆಗಳನ್ನು ಒಡೆಯುವುದಿಲ್ಲ, ಹಣೆಯ ಕುಂಕುಮವನ್ನು ಅಳಿಸಿಕೊಳ್ಳುವುದಿಲ್ಲ, ಕೈಗೆ ಹಾಕಿದ ಗೊಲ್ಲ ಕಡಗವನ್ನು ತೆಗೆಯುವುದಿಲ್ಲ, ಮುತ್ತೈದೆಯಂತೆಯೇ ಇರುತ್ತಾಳೆ. ತನ್ನ ಗಂಡ ಸತ್ತರೂ ತನ್ನ ನಿಜವಾದ ಗಂಡ ಶ್ರೀಕೃಷ್ಣನೇ ಅವನಿಗೆ ಸಾವಿಲ್ಲ ಆದ್ದರಿಂದ ನಾವು ಮುತ್ತೈದೆ ತನವನ್ನು ತೆಗೆಯುವುದಿಲ್ಲ ಎಂದು ನನ್ನ ಅಧ್ಯಯನದ ಕ್ಷೇತ್ರದಲ್ಲಿ ವ್ಯಕ್ತಿಗಳಿಂದ ಕೇಳಿ ಬಂದ ಮಾತುಗಳಿವು.

ನಮ್ಮ ಗಂಡ ಸತ್ತರೂ ಸಹ ನಾವು ಎಲ್ಲಾ ಮಂಗಳಕಾರ್ಯಗಳಲ್ಲಿ ಸಕ್ರಿಯವಾಗಿ ಭಾಗವಹಿಸಿ ಮುತ್ತೈದೆಯರಂತೆಯೇ ಕಾರ್ಯಗಳನ್ನು ಮಾಡುತ್ತೇವೆ. ಎಂದು ಈ ಸಮುದಾಯದ ಮಹಿಳೆಯರು ಹೇಳುವರು.

ಒಂದು ವೇಳೆ ಈ ಸಮುದಾಯದಲ್ಲಿ ಹೆಂಡತಿ ಏನಾದರೂ ತೀರಿಕೊಂಡರೆ, ಗಂಡನಾದವನು ಅವಳನ್ನು ಮಣ್ಣು ಮಾಡಿದ ದಿನದಿಂದ ಮೂರು ತಿಂಗಳವರೆಗೆ ವನವಾಸ ಹೋಗುವ ನಿಯಮವಿತ್ತು. ಆದರೆ ಇತ್ತೀಚೆಗೆ ಈ ನಿಯಮ ಸಡಿಲಗೊಂಡು, ಮೂರು ದಿನಗಳು ಮಾತ್ರ ಊರಿನ ಎಲ್ಲೆಯನ್ನು ದಾಟುವ ನಿಯಮವನ್ನು ಇಟ್ಟುಕೊಂಡಿದ್ದಾರೆ. ಆದರೆ ಈ ನಿಯಮ ಮಹಿಳೆಗೆ ಅನ್ವಯಿಸದು.

ಮೊಳಕಾಲ್ಮುರು ತಾಲ್ಲೂಕಿನ ಪ್ರದೇಶದಲ್ಲಿ ಕ್ಷೇತ್ರಕಾರ್ಯ ಕೈಗೊಂಡ ಸಂದರ್ಭದಲ್ಲಿ ಈ ಕಾಡುಗೊಲ್ಲರ ಶವಸಂಸ್ಕಾರ ಪದ್ಧತಿ ಏಕ ರೀತಿಯಾಗಿಯೇ ಕಂಡು ಬರುತ್ತದೆ. ಒಟ್ಟಾರೆಯಾಗಿ ಶವಸಂಸ್ಕಾರವೆಂದರೆ "ಸತ್ತ ವ್ಯಕ್ತಿಗೆ ಮೋಕ್ಷ" ಕಾಣಿಸುವುದು ಎಂದರ್ಥ.

**೩.೨ ಆಚರಣೆಗಳು**

ಸಮಾಜವನ್ನು ಒಂದುಗೂಡಿಸುವ ಶಕ್ತಿಯನ್ನು ಸಂಪ್ರದಾಯ ಮತ್ತು ಆಚರಣೆಗಳು ಮಾಡುತ್ತವೆ. ಆಚರಣೆಯೆಂದರೆ ಯಾವುದೇ ಒಂದು ಸಮುದಾಯವು ಪರಂಪರಾಗತವಾಗಿ ರೂಢಿಸಿಕೊಂಡು ಬಂದಿರುವ, ನಿರ್ದಿಷ್ಟ ಸ್ಥಳದಲ್ಲಿ, ನಿರ್ದಿಷ್ಟಕಾಲದಲ್ಲಿ ನಡೆಯುವ ಕ್ರಿಯೆಯಾಗಿದೆ. ಇದು ಕೇವಲ ಒಬ್ಬ ವ್ಯಕ್ತಿಯಿಂದ ಸೃಷ್ಟಿಯಾದದ್ದಲ್ಲ. ಅದು ಯಾವುದೇ ಒಂದು ಜನಾಂಗದ ಜೀವನವಿಧಾನ, ಬೇಡಿಕೆಯ ಅಂಗವಾಗಿ ಹುಟ್ಟಿಕೊಂಡ ಅಂಶವಾಗಿದೆ. ಇದು ಮನುಷ್ಯನ ಜೀವನದ ಅವಿಭಾಜ್ಯ ಅಂಗಗಳಾಗಿ ಅವರ ಬದುಕನ್ನು ರೂಪಿಸುವುದರ ಜೊತೆಗೆ ಸಂಸ್ಕೃತಿಯನ್ನು ಪೋಷಣೆ ಮಾಡುತ್ತವೆ. ಯಾವುದೇ ಒಂದು ಆಚರಣೆಗೆ ನಂಬಿಕೆಯೇ ಬೆನ್ನೆಲುಬು ಆಗಿದೆ. ಮನುಷ್ಯರಿಗೆ ದೇವರು, ಪ್ರಕೃತಿಯ ಮೇಲಿನ ಭಯದಿಂದಾಗಿ ಅವುಗಳ ಮೇಲಿನ ಭಕ್ತ ಮನೋಭಾವವನ್ನು ಬೆಳೆಸಿಕೊಳ್ಳುತ್ತಾರೆ. ಈ ದೇವರ ಮೇಲಿನ ನಂಬಿಕೆಯೇ ಮನುಷ್ಯರನ್ನು ಆಚರಣೆ ಮಾಡಲು ತೊಡಗಿಸುತ್ತದೆ. ಈ ರೀತಿ ಆಚರಣೆಗಳನ್ನು ಮಾಡಿಕೊಂಡು ಬರುವುದರಿಂದ ನಮಗೆ ಬಂದ ಕಷ್ಟವೂ ಪರಿಹಾರವಾಗುವದು ಹಾಗೂ ಮಾನಸಿಕ ನೆಮ್ಮದಿಯೂ ದೊರೆಯುವುದು ಎಂದು ಜನರಲ್ಲಿ ನಂಬಿಕೆಯಿದೆ. ಅಂದರೆ ನಂಬಿಕೆಯಿಂದಲೆ ಆಚರಣೆ ಜನಾಂಗಿಕ ಮತ್ತು ಸಾಂಸ್ಕೃತಿಕ ವಾತಾವರಣದ ಹಿನ್ನೆಲೆಯಲ್ಲಿ ಇಂದಿಗೂ ಆಚರಣೆಗಳು ಹುಟ್ಟಿಕೊಂಡು ಬಂದಿವೆಯೆಂದು ಹೇಳಬಹುದು. ಅಂದರೆ ಭೌಗೋಳಿಕ ಪ್ರದೇಶಕ್ಕೆ ತಕ್ಕಂತೆ ಕಾಲಕ್ಕೆ ತಕ್ಕಂತೆ ಬದಲಾವಣೆಯನ್ನು ಪಡೆಯುತ್ತವೆಯೇ ಹೊರೆತು ಯಾವುದೇ ಆಚರಣೆಯಾಗಲಿ ನಶಿಸಿ ಹೋಗುವುದಿಲ್ಲ.

ಈ ಕಾಡುಗೊಲ್ಲ ಸಮುದಾಯದಲ್ಲಿ ಆಚರಿಸುವ ಹಬ್ಬಗಳು ಅತೀ ಮುಖ್ಯ ಪಾತ್ರವಹಿಸುತ್ತವೆ. ಒಂದೊಂದು ಋತುಗಳು ಬದಲಾವಣೆಯಾದಂತೆ ಆಯಾ ಕಾಲಕ್ಕೆ ತಕ್ಕಂತೆ ಮನರಂಜನೆ ಮತ್ತು ಸುಖ ಸಂತೋಷಗಳಿಗಾಗಿ ಒಪ್ಪುವಂತಹ ಹಬ್ಬ ಹರಿದಿನಗಳನ್ನು ಆಚರಿಸುವಂತ ಪದ್ಧತಿಗಳು ಕಂಡುಬರುತ್ತವೆ. ಈ ಹಬ್ಬಗಳು ಜನರಲ್ಲಿ

ಐಕ್ಯತೆಯನ್ನು ಮೂಡಿಸುತ್ತವೆ. ಹಬ್ಬದ ದಿನದಂದು ಜನರು ತಮ್ಮ ಎಲ್ಲಾ ನೋವು ಕಷ್ಟಗಳನ್ನು ಮರೆತು ಸಂತೋಷದಿಂದ ಆಚರಿಸುತ್ತಾರೆ. ಯಾವುದೇ ಹಬ್ಬವಿರಲಿ ತಾವು ನಂಬಿರುವ ದೇವರು ದೇವತೆಯ ಆರಾಧಾನೆಗಾಗಿ ಅಂದು ಮನೆ ಮನೆಗಳಲ್ಲಿ ದೇವರ ಪೂಜೆ ಆರಾಧನೆ ನಡೆಯುವಂತೆ ಆಯಾ ದೇವರುಗಳಿಗಾಗಿ ಮೀಸಲಾದ ಗುಡಿಗುಬ್ಬಗಳಲ್ಲಿ ವಿಶೇಷ ಪೂಜಾ ಕಾರ್ಯಗಳು ನಡೆಯುತ್ತವೆ. ಯಾವುದೇ ಬುಡಕಟ್ಟು ಜನಾಂಗದ ಸಂಪ್ರದಾಯ, ಆಚಾರ, ವಿಚಾರ, ನಂಬಿಕೆ, ಉಡುಗೆ, ತೊಡುಗೆ ಮತ್ತು ಸಂಸ್ಕೃತಿಯನ್ನು ಅವರು ಆಚರಿಸುವ ಹಬ್ಬ ಹರಿದಿನಗಳಲ್ಲಿ ಸ್ಪಷ್ಟವಾಗಿ ಗುರುತಿಸಬಹುದು. ಈ ಕಾಡುಗೊಲ್ಲರು ಋತುಮಾನಕ್ಕನುಗುಣವಾಗಿ ಗುಗ್ಗರಿ ಹಬ್ಬ, ಶಿವರಾತ್ರಿ, ಯುಗಾದಿ, ನಾಗರ ಪಂಚಮಿ, ಹಿರಿಯರ ಹಬ್ಬ, ದೀಪಾವಳಿ, ಮಾರಮ್ಮನ ಹಬ್ಬ ಮೊದಲಾದ ಹಬ್ಬಗಳನ್ನು ವೈಶಿಷ್ಟ್ಯ ಪೂರ್ಣವಾಗಿ ಆಚರಿಸುತ್ತಾರೆ.

### ೩.೨.೧ ಯುಗಾದಿ

ಉಂಡದ್ದು ಯುಗಾದಿ ಮಿಂದದ್ದು ದೀಪಾವಳಿ ಎಂಬ ಗಾದೆ ಯುಗಾದಿಯ ಮಹತ್ವವನ್ನು ತಿಳಿಸುತ್ತದೆ. ಚೈತ್ರ ಮಾಸದಲ್ಲಿ ಬರುವ ಯುಗಾದಿ ಹಬ್ಬವನ್ನು ಕಾಡುಗೊಲ್ಲರ ಸಮುದಾಯ ಮೂರು ದಿನಗಳಲ ಕಾಲ ಹಟ್ಟಿಯ ಜನರೆಲ್ಲರೂ ಒಗ್ಗಟ್ಟಿನಿಂದ ಆಚರಿಸುವರು. ಕೃಷಿ ಕಾರ್ಯಗಳ ಕೆಲಸಗಳನ್ನು ಸಂಪೂರ್ಣವಾಗಿ ಮುಗಿಸಿಕೊಂಡು ಬಿಡುವು ಮಾಡಿಕೊಂಡದ್ದರಿಂದ ಅದರಲ್ಲಿಯೂ ಈ ಸಮುದಾಯದ ಮಹಿಳೆಗೆ ನವಸಂತೋಷವನ್ನು ತಂದುಕೊಡುತ್ತದೆ. ಈ ಹಬ್ಬದಲ್ಲಿ ಮಹಿಳೆಯ ಪಾತ್ರವೇ ಹೆಚ್ಚು.

ಯುಗಾದಿ ಹಬ್ಬದಂದು ಮಹಿಳೆ ಸುಮಾರು ಬೆಳಿಗ್ಗೆ ನಾಲ್ಕೂವರೆ ಇಲ್ಲವೇ ಐದುಗಂಟೆಗೆ ಎದ್ದು ಬೇವಿನ ಸೊಪ್ಪನ್ನು ನೀರಿನಲ್ಲಿ ಬೆರೆಸಿ ಎಣ್ಣೆ ಸ್ನಾನ ಮಾಡಿ ನಂತರ ನಿಷ್ಟೆಯಿಂದ ದೇವರ ಪೂಜೆಗೆ ಬೇಕಾಗುವ ಸಾಮಾನುಗಳನ್ನು ಸ್ವಚ್ಛಗೊಳಿಸಿ ಉಪವಾಸದಿಂದ ದೇವರಿಗೆ ನೈವೇದ್ಯವನ್ನು ಮತ್ತು ಸಿಹಿ ಅಡುಗೆಯನ್ನು ಸಿದ್ಧಪಡಿಸುವಳು. ಈ ಆಚರಣೆಯಲ್ಲಿ ಮಹಿಳೆಯ ಪಾತ್ರ ಪ್ರಮುಖವಾಗಿದೆ. ಯುಗಾದಿ ಹಬ್ಬದ ಎರಡನೇ ದಿನ ಊಟವಾದ ನಂತರ ಹಟ್ಟಿಯ ಗೊಲ್ಲ ಪುರುಷರು ಕಾಡಿಗೆ ಹೋಗಿ ಬೇಟೆಯಾಡುವುದು ಅನೂಚನ ಸಂಪ್ರದಾಯವಾಗಿದೆ. ಹೀಗಾಗಿ ಕಾಡಿಗೆ ಹೋಗಿ ಯಾವುದಾದರೊಂದು ಕಾಡುಪ್ರಾಣಿಯನ್ನು ಬೇಟೆಯಾಡಿ ತಂದಾಗ ಅವರಿಗೆ ಹಟ್ಟಿಯ ಮುತ್ತೈದೆಯರೆಲ್ಲರೂ ಸೇರಿ ಮಂಗಳಾರತಿಯನ್ನು ಬೆಳಗುವುದು ಅವರ ವಿಜಯದ ಸಂಕೇತವಾಗಿದೆ. ಬೇಟೆಯಾಡಿ ತಂದ ಪ್ರಾಣಿಯನ್ನು ಬೇಯಿಸಿ ಅಡುಗೆ ಮಾಡುವಲ್ಲಿ ಮತ್ತು ಅದನ್ನು ಉಣಬಡಿಸುವಲ್ಲಿ ಮಹಿಳೆ ಅತ್ಯಂತ ಶ್ರಮ ಪಡುವಳು. ಯುಗಾದಿಯ ದಿನ ಸಾಯಂಕಾಲ ಈ ಸಮುದಾಯದ ಮಹಿಳೆ ಚಂದ್ರ ದರ್ಶನವನ್ನು ತನ್ನ ಮಕ್ಕಳಿಗೆ ಮಾಡಿಸಿ ಅವರನ್ನು ತುಂಬು ಹೃದಯದಿಂದ ಹಾರೈಸುವಳು.

### ೩.೨.೨ ನಾಗರಪಂಚಮಿ

ಶ್ರಾವಣ ಮಾಸದಲ್ಲಿ ಬರುವ ಈ ನಾಗರಪಂಚಮಿ ಹಬ್ಬವನ್ನು ಈ ಪ್ರದೇಶದ ಕಾಡುಗೊಲ್ಲ ಸಮುದಾಯದವರು ಈ ಹಬ್ಬವನ್ನು ಪಂಚಮಿ ನಾಗಪ್ಪನ ಹಬ್ಬವೆಂದು ವಿಧ ವಿಧವಾಗಿ ಕರೆಯುವುದೂ ಉಂಟು. ಈ ಹಬ್ಬಕ್ಕೆ ಮನೆಯ ಹೆಣ್ಣುಮಗಳನ್ನು ಕಡ್ಡಾಯವಾಗಿ ಗಂಡನ ಮನೆಯಿಂದ ಕರೆದುಕೊಂಡು ಬರುವ ಸಂಪ್ರದಾಯವಿದೆ. ಶ್ರಾವಣ ಮಾಸದಲ್ಲಿ ಬರುವ ಈ ಪಂಚಮಿ ಹಬ್ಬವನ್ನು ಈ ಸಮುದಾಯದವರು ಅದರಲ್ಲೂ ಮಹಿಳೆಯರು ತುಂಬಾ ಭಯ-ಭಕ್ತಿಯಿಂದ ಆಚರಿಸುವರು. ಈ ಸಮುಯದಲ್ಲಿ ಮಹಿಳೆಯರು ಮನೆಗೆ ಸುಣ್ಣವನ್ನೂ, ಕೆಮ್ಮಣ್ಣು, ತಾರನ್ನೂ, ಬಣ್ಣವನ್ನೂ ಬಳೆದು ನೆಲವನ್ನು ಸಗಣಿಯಿಂದ ಸಾರಿಸಿ ಮಡಿಗೊಳಿಸುವಳು. ಈ ಬುಡಕಟ್ಟು ಜನಾಂಗ ಹುತ್ತ ಅಥವಾ ನಾಗರಕಲ್ಲುಗಳಿಗೆ ಆ ದಿನ ಮಹಿಳೆ ಉಪವಾಸದಿಂದ ಪೂಜೆ ಸಲ್ಲಿಸುತ್ತಾಳೆ. ಮೀಸಲು ಅಡಿಗೆ ಮಾಡಿ ತಂಬಿಟ್ಟು, ಚಿಗಳೆ, ನೆನೆಯಕ್ಕಿ, ನೆನೆಗಡಲೆ, ತೆಂಗಿನ ಕಾಯಿ, ಬಾಳೆ ಹಣ್ಣು, ಬಿಳಿಯ ಅಂಗನೂಲು ದಾರ ಮತ್ತು ಹೊಸ ವಸ್ತ್ರಗಳನ್ನು ತೆಗೆದುಕೊಂಡು ಮಹಿಳೆ ತನ್ನ ಪರಿವಾರದೊಂದಿಗೆ ತನ್ನ ಹಟ್ಟಿಗೆ ಸುತ್ತಮುತ್ತ ಇರುವ ಹುತ್ತದ ಹತ್ತಿರ ಹೋಗಿ ಕಾಯಿ ಹೊಡೆದು ಪೂಜೆ ಮಾಡಿ ನೈವೇದ್ಯವನ್ನು ಹಾವಿನ ಹುತ್ತದ ಬಿಲದಲ್ಲಿ ಬಿಟ್ಟು ನಂತರ ಮೂರು ಸಲ ಹಾಲನ್ನು ಒಯ್ಯುವರು. ಇದೇ ರೀತಿ ಮುತ್ತೈದೆಯರೆಲ್ಲರೂ ಬಿಲದಲ್ಲಿ ಹಾಲನ್ನು ಬಿಡುವರು. ಈ ಹಬ್ಬದಲ್ಲಿ ಕಡ್ಡಾಯವಾಗಿ ಗೋದಿನುಚ್ಚಿನ ಪಾಯಸವನ್ನೇ ಮಾಡುವರು.

ಮೊಳಕಾಲ್ಮೂರು ತಾಲ್ಲೂಕಿನ ಪ್ರಸ್ತುತ ಅಧ್ಯಯನದ ಕ್ಷೇತ್ರದಲ್ಲಿ ಬರುವ ಹೊಸ ಕೋಟೆ, ಹೊಸ ಹಳ್ಳಿ, ವೆಂಕಟಾಪುರ, ನಾಗ ಸಮುದ್ರ, ಚಿಕ್ಕೇರ ಹಳ್ಳಿ, ಈ ಗೊಲ್ಲರ ಹಟ್ಟಿಗಳ ಜನರು ದೇವ ಸಮುದ್ರದ ಗಂಗಮ್ಮ ಮತ್ತು ನಾಗಪ್ಪನ ಬೆಟ್ಟವೆಂದೇ ಪ್ರಸಿದ್ಧವಾದ ಸ್ಥಳಕ್ಕೆ ಬಂದು ನಾಗಪ್ಪನ ಹಬ್ಬವನ್ನು ಜೊತೆಗೆ ಗಂಗೆಯ ಪೂಜೆಯನ್ನು ಈ ಸಮುದಾಯದ ಮಹಿಳೆಯರು ಪ್ರತಿ ಶ್ರಾವಣ ಮಾಸದಲ್ಲಿ ತಮ್ಮ ಪರಿವಾರದೊಂದಿಗೆ ಬಂದು ಇಲ್ಲಿಯೇ ಅಡಿಗೆಯನ್ನು ಮಾಡಿ ಹಬ್ಬವನ್ನು ಆಚರಿಸುತ್ತಾರೆ. ಇಲ್ಲಿನ ಅಡಿಗೆಯಲ್ಲಿ ಕಾರೇ ಗಿಡದ ಸೊಪ್ಪಿನಿಂದ ಪಲ್ಯಮಾಡುವುದು ವಿಶೇಷವಾಗಿರುತ್ತದೆ. ಈ ಪಲ್ಯ ಅತ್ಯಂತ ರುಚಿಕರವಾಗಿರುತ್ತದೆ.

ಈ ಭಾಗದ ಸುತ್ತಮುತ್ತಲ ಪ್ರದೇಶಗಳಲ್ಲಿ ಕಾಡುಗೊಲ್ಲರು ತಮ್ಮ ಹೆಣ್ಣುಮಕ್ಕಳಿಗೆ ನಾಗಮ್ಮ, ನಾಗಲಾಂಬಿಕೆ, ನಾಗವೇಣಿ, ಗಂಗಮ್ಮ ಎಂಬ ಹೆಸರುಗಳು ಈ ಜನಾಂಗದಲ್ಲಿ ಬಳಕೆಯಲ್ಲಿವೆ. ಇವರ ಕುಲಗೋತ್ರ, ಬಳಿ, ಬೆಡಗುಗಳಲ್ಲಿ ಹಾವಿಗೆ ಸಂಬಂಧಿಸಿದವುಗಳನ್ನು ಗುರುತಿಸಬಹುದಾಗಿದೆ. ಈ ಸಮುದಾಯ ನಾಗರ ಹಾವು ಮತ್ತು ನಾಗರಕಲ್ಲುಗಳಿಗೆ ವಿಶೇಷ ಮಹತ್ವ ಕೊಟ್ಟು ಪವಿತ್ರ ಪ್ರಾಣಿಯಂತೆ ಪೂಜಿಸುತ್ತಾರೆ. ಈ ಸಮುದಾಯದಲ್ಲಿ ಮಹಿಳೆ ತನ್ನ ಮಕ್ಕಳಿಗೆ ಸರ್ಪದೋಷ, ಹಾವಿನ ಕಾಟ, ಕಿವಿಸೋರಿದರೆ, ಹುಣ್ಣಾದರೆ, ಪೋಟಾದರೆ ನಾಗಪ್ಪನ ಹರಕೆ ಹೊತ್ತು ಒಪ್ಪತ್ತಿನಿಂದ ಹುತ್ತಕ್ಕೆ ಪೂಜೆ ಸಲ್ಲಿಸುವಲ್ಲಿ ವಿಶೇಷ ಗಮನ ನೀಡುತ್ತಾಳೆ. ಜೊತೆಗೆ ಬೆಳ್ಳಿಯ ನಾಗರ ಹೆಡೆಯನ್ನು ಮಾಡಿಸಿ ದೇವರಿಗೆ ಕೊಡುವುದನ್ನು ಈ ಪ್ರದೇಶದಲ್ಲಿ ಕಾಣಬಹುದಾಗಿದೆ. ಈ ರೀತಿಯಾದಂತಹ ಆಚರಣೆಯನ್ನು ನಾವು ಜುಂಜಪ್ಪನ ಕಾವ್ಯದಲ್ಲಿಯೂ ಕಾಣಬಹುದಾಗಿದೆ.

### ೩.೨.೩ ಶಿವರಾತ್ರಿ

ಮಾಘ ಮಾಸದ ಕೃಷ್ಣಪಕ್ಷದಲ್ಲಿ ಬರುವ ಚತುರ್ದಶಿಗೆ ಶಿವರಾತ್ರಿಯೆಂದೇ ಹೆಸರು. ಈ ಮಹಾಶಿವರಾತ್ರಿ ಹಬ್ಬ ಕಾಡುಗೊಲ್ಲರಿಗೆ ಒಂದು ಪುಣ್ಯದ ದಿನವೆಂದರೆ ತಪ್ಪಾಗಲಾರದು. ಈ ಹಬ್ಬದ ಆಚರಣೆಯಲ್ಲಿ ಕಾಡುಗೊಲ್ಲ ಸಮುದಾಯದವರು ಅತ್ಯಂತ ಸರಳವಾಗಿ ಆಚರಿಸಲು ಶಿವರಾತ್ರಿಯಲ್ಲಿ ಶಿವನ ನಾಮಸ್ಮರಣೆ ಮಾಡುತ್ತಾ ಜಾಗರಣೆ ಮಾಡಿದರೆ ಸಹಸ್ರ ವರ್ಷಗಳವರೆಗೆ ತಪಸ್ಸು ಮಾಡಿದ ಫಲವು ಸಿದ್ಧಿಸುವುದು. ಮಹಾ ಶಿವರಾತ್ರಿಯಲ್ಲಿ ಭಕ್ತರು ಒಳ್ಳೆಯ ಭಕ್ತಿಯಿಂದ ಶಿವ ಭಜನೆ ಮಾಡುತ್ತಾ ಶುದ್ದೋದಕದಿಂದ ಸ್ನಾನ ಮಾಡಿ ಶಿವನನ್ನು ಧೂಪ ದೀಪ ನೈವೇದ್ಯಾದಿಗಳಿಂದ ಪೂಜಿಸಿದ್ದಾದರೆ ಪವಿತ್ರವಾದ ಗಂಗಾನದಿಯಲ್ಲಿ ಮುಳುಗಿ ಕಾಶಿ ವಿಶ್ವೇಶ್ವರನ ದರ್ಶನ ಲಭಿಸುವ ಪುಣ್ಯವು ದೊರಕುವುದೆಂದು ಈ ಪುಣ್ಯಕ್ಕೆ ಸರಿಸಮಾನ ಯಾವುದು ಇಲ್ಲವೆಂದು ಸ್ಕಂಧ ಪುರಾಣದಲ್ಲಿ ಹೇಳಿರುವುದರಿಂದ ಈ ಬಡಕಟ್ಟಿನ ಮಹಿಳೆಯರು ಅತ್ಯಂತ ಭಕ್ತಿ ಪರವಶತೆಯಿಂದ ಶಿವನನ್ನು ಜಾಗರಣೆ ಮಾಡುವುದರ ಮೂಲಕ ಅತ್ಯಂತ ಸರಳವಾಗಿ ಆಚರಿಸುವರು.

ಕಾಡುಗೊಲ್ಲರ ಪ್ರಮುಖ ದೈವಗಳಾದ ಚಿತ್ರಲಿಂಗ, ಕಾಟಮಲಿಂಗ, ಪಾತೇಲಿಂಗ, ಕ್ಯಾತೇಲಿಂಗ ಮತ್ತು ರಾಮಲಿಂಗ ಎಂಬ ಪಂಚ ಲಿಂಗಗಳು ಈಶ್ವರನ ಪ್ರತಿರೂಪವೆಂದು ಭಾವಿಸಿ ಶಿವರಾತ್ರಿ ಹಬ್ಬದ ದಿನದಂದು ಈ ಮಹಿಳೆಯರು ಅಂದು ರಾತ್ರಿಯೆಲ್ಲಾ ಜಾಗರಣೆಯನ್ನು ಭಜನೆ ಕೀರ್ತನೆ ಹಾಡುವುದರ ಮೂಲಕ ಶಿವನ ಲೀಲಾ ಜಾಲಗಳನ್ನು ಕಥೆಯ ರೂಪದಲ್ಲಿ ಹೇಳುವುದರ ಮೂಲಕ ಕಾಡುಗೊಲ್ಲ ಸಮುದಾಯದವರು ಪಂಚಾಕ್ಷರಿ ಮಂತ್ರವನ್ನು ಹೆಳುತ್ತಾ ಶಿವನಿಗೆ ಪೂಜೆಯನ್ನು ಮಾಡುವರು.

### ೩.೨.೪ ಮಾರೆಮ್ಮನ ಹಬ್ಬ

ಕಾಡುಗೊಲ್ಲ ಸಮುದಾಯದವರು ಬಾದ್ರಪದ ಮಾಸದಲ್ಲಿ ಈ ಮಾರಮ್ಮನ ಹಬ್ಬವನ್ನು ಆಚರಿಸುವರು. ಇದು ಮೊಳಕಾಲ್ಮೂರುವಿನಿಂದ ಸು. ೨೦ ಕಿ.ಮೀ. ದೂರದಲ್ಲಿರುವ ಗೌರಸಮುದ್ರದಲ್ಲಿ ಮಾರಮ್ಮನ ಪ್ರಮುಖ ಧಾರ್ಮಿಕ ಕೇಂದ್ರವಿದ್ದು ಕಾಡುಗೊಲ್ಲರ ಎತ್ತಪ್ಪ, ಜುಂಜಪ್ಪ ಮೊದಲಾದ ಸಾಂಸ್ಕೃತಿಕ ವೀರರ ಕಥೆಗಳಲ್ಲಿ ಗೌರಸಮುದ್ರ ಮಾರೆಮ್ಮ, ಯರಬಳ್ಳಿ ಮಾರಕ್ಕ, ಬೇವಿನಹಳ್ಳಿ ಕರಿಯಮ್ಮ ಮೊದಲಾದ ಶಕ್ತಿ ದೇವತೆಗಳ ಪ್ರಸ್ತಾಪ ಇದೆ. ವಿಶೇಷತೆಯೆಂದರೆ ಬಾದ್ರಪದ ಮಾಸದ ಮೊದಲನೇ ಮಂಗಳವಾರ ಗೌರಸಮುದ್ರದಲ್ಲಿ ಮಾರಮ್ಮನ ಹಬ್ಬ ಆಚರಿಸಿದ ನಂತರ ಉಳಿದೆಲ್ಲಾ ಕಡೆಯೂ ಅವರವರ ಅನುಕೂಲಕ್ಕೆ ತಕ್ಕಂತೆ ಒಂದು ಮಂಗಳವಾರ ಈ ಮಾರಮ್ಮನ ಹಬ್ಬವನ್ನು ಆಚರಿಸುತ್ತಾರೆ.

ಕಾಡುಗೊಲ್ಲರೇಕೆ ಈ ಹಬ್ಬವನ್ನು ಆಚರಿಸುವರೆಂದರೆ ಈ ಸಮುದಾಯದ ಮೂಲ ಪುರುಷರಾದ ಅಂಬೇರಾಯ, ತುಂಬೇರಾಯರು ಪಶುಪಾಲನೆಯನ್ನು ಮಾಡುತ್ತಿದ್ದು, ಅವರಿಗೆ ವಯಸ್ಸಾಗಿ ಮರಣವನ್ನಪ್ಪುವಂತಹ ಸಂದರ್ಭದಲ್ಲಿ ಈ ಮಾರಮ್ಮನನ್ನು ಪ್ರಾರ್ಥಿಸಿದಾಗ ಆ ಮಹಾತಾಯಿ ಬಂದು ಅದಕ್ಕೆ ತಕ್ಕನಾದವನನ್ನು ಹುಡುಕಿ ನಿಮ್ಮ ರಾಸುಗಳನ್ನು ರಕ್ಷಿಸುತ್ತೇನೆ ಎಂದಾಗ ಅವರಿಬ್ಬರು ಮರಣವನ್ನಪ್ಪುವರು. ಆಗ ಗೌರಸಮುದ್ರದ ಮಾರಮ್ಮ ಶಿವಪಾರ್ವತಿಯರನ್ನು ಕುರಿತು ತಪಸ್ಸು ಮಾಡಿ ಪಶುಪಾಲನೆ ಮಾಡಲು ತಕ್ಕನಾದವನನ್ನು ತೋರುವರು. ಆಗ ಮಾರಮ್ಮಳಿಗೆ ಹುತ್ತದಲ್ಲಿರುವ ಬಾಲಕ ವೀರಭದ್ರನ ಅವತಾರನಾದ ಜುಂಜಪ್ಪನನ್ನು ಸಾಕಿ ಸಲುಹಿ ಈ ಸಮುದಾಯದವರ ಪಶುಪಾಲನೆ ವೃತ್ತಿಯನ್ನು ಉಳಿಸಿದ್ದಕ್ಕಾಗಿ ಈ ತಾಯಿ ಪೂಜೆಯನ್ನು ಮಾಡುವರು.

ಈ ಸಮುದಾಯದವರು ಮೊಳಕಾಲ್ಮೂರು ಸುತ್ತಮುತ್ತಲಿನ ಪ್ರದೇಶದಿಂದ ಎತ್ತಿನ ಗಾಡಿಗಳನ್ನು ಕಟ್ಟಿಕೊಂಡು ಮಹಿಳೆಯರೂ ಸೇರಿದಂತೆ ಎಲ್ಲರೂ ಗೌರಸಮುದ್ರದ ಮಾರಮ್ಮನ ಸನ್ನಿಧಿಗೆ ಹೋಗಿ ಪ್ರಾಣಿ ಬಲಿಗಳನ್ನು ಕೊಟ್ಟು ನವಶಕ್ತಿಯರಲ್ಲಿ ಎಲ್ಲಮ್ಮ, ಮಾರಿ, ಅಂಕಾಲಮ್ಮ, ಪಿಡಾರಿ, ಭದ್ರಕಾಳಿ, ದುರ್ಗಿ, ಚಾಮುಂಡಿ, ಪೂರ್ಣಪುಷ್ಕಲ ಒಂಬತ್ತು ಶಕ್ತಿಗಳ ಸ್ವರೂಪವೇ ಆದಿಶಕ್ತಿ. ಈ ನವಶಕ್ತಿ ದೇವತೆಯರಲ್ಲಿ ಮಾರಮ್ಮ ಒಬ್ಬಳು. ಮಕ್ಕಳಿಗೆ ದಡಾರ, ಸಿಡುಬು, ತೊಟ್ಟು, ಅಮ್ಮ ಮೊದಲಾದ ಮಾರಕ ರೋಗಗಳಿಂದ ರಕ್ಷಿಸಿಕೊಳ್ಳಲು ಈ ಸಮುದಾಯದ ಮಹಿಳೆಯರು ಹರಕೆಹೊತ್ತು ಮಾರಮ್ಮನ ಗುಡಿಯ ಹತ್ತಿರ ಬೇವಿನ ಸೀರೆ ಉಟ್ಟು, ಗೋಧಿಯ ಹಿಟ್ಟಿನಿಂದ ಆರತಿಯನ್ನು ಮಾಡಿ ತಲೆ ಮೇಲೆ ಹೊತ್ತುಕೊಂಡು ಮಾರಮ್ಮನ ಗುಡಿಯ ಪ್ರದಕ್ಷಿಣೆ ಹಾಕುತಾರೆ.

ಮಾರಮ್ಮಗೆ ಅರಿಶಿಣ, ಕುಂಕುಮ, ಹಣ್ಣು ಕಾಯಿ ಕೊಟ್ಟು ಆರತಿ ಬೆಳಗುತ್ತಾರೆ. ಇಷ್ಟೆಲ್ಲಾ ಕಾರ್ಯಗಳನ್ನು ಮಾಡುವಾಗ ಮಹಿಳೆ ಬಹಳ ನಿಯಮದಿಂದ ಇರಬೇಕಾಗುತ್ತದೆ. ಒಂದು ವೇಳೆ ನಿಯಮ ತಪ್ಪಿದರೆ ಮಾರಿ ಪುನಃ ತಮಗೆ ಕೇಡನ್ನು ಉಂಟು ಮಾಡುವಳೆಂಬ ಭಯ ಇವರಲ್ಲಿ ತುಂಬಿ ತುಳುಕಿರುತ್ತದೆ. ಇನ್ನೊಂದು ಕಡೆ ಗಂಡಸರು ಮಾರಿ ಗುಡಿ ಬಳಿ ಎಳೆದೊಯ್ದು ಕುರಿ ಮೇಕೆಗಳನ್ನು ಬಲಿಕೊಟ್ಟು ಅವನ್ನು ಹೊತ್ತುಕೊಂಡು ಹೋಗುವ ಕಾಡುಗೊಲ್ಲರ ಸಡಗರ ಮತ್ತು ಉತ್ಸಾಹವೇ ಅವರ ಮೂಲ ಬೇಟೆ ವೃತ್ತಿ ನೆನಪು ಮರುಕಳಿಸುತ್ತದೆ. ಈ ಸಮುದಾಯದವರು ಎಂತಹ ಬಡವರಾದರೂ ಪ್ರಾಣಿ ಬಲಿಕೊಟ್ಟು ಆಚರಿಸುವ ಪದ್ಧತಿ ಮೊಳಕಾಲ್ಮೂರು ತಾಲ್ಲೂಕಿನ ಪ್ರದೇಶದ ಜನರಲ್ಲಿದೆ. ಚಳ್ಳಕೆರೆ ತಾಲ್ಲೂಕಿನಲ್ಲಿರುವ ಈ ಗೌರಸಂದ್ರದ ಮಾರಮ್ಮನ ಹಬ್ಬ ಮೊಳಕಾಲ್ಮೂರು ತಾಲ್ಲೂಕಿನ ಕಾಡುಗೊಲ್ಲ ಸಮುದಾಯದವರಿಗೆ ಬಹಳ ಮುಖ್ಯವಾದ ಹಬ್ಬ ಮತ್ತು ಜಾತ್ರೆಯಾಗಿದೆ.

### ೩.೨.೫ ಹಿರಿಯರ ಹಬ್ಬ

ಅಶ್ವೀಜ ಮಾಸದ ಮಹಾನವಮಿಯಂದು ಕಾಡುಗೊಲ್ಲರು ಹಿರಿಯರ ಹಬ್ಬವನ್ನು ಆಚರಿಸುತ್ತಾರೆ. ಕೆಲವೊಂದು ಹಟ್ಟಿಗಳಲ್ಲಿ ಯುಗಾದಿ, ದಸರಾ ಮತ್ತು ಗಂಡು ಮಕ್ಕಳ ಮದುವೆಯ ಸಂದರ್ಭದಲ್ಲಿಯೂ ಕೂಡ ಹಿರಿಯರ ಹಬ್ಬವನ್ನು ಮಾಡುತ್ತಾರೆ. ಇದನ್ನು ದೇವರ ಊಟ ಎಂದು ಕರೆಯುತ್ತಾರೆ. ಬಹು ಹಿಂದೆ ವೃದ್ಧರಾಗಿ ಸತ್ತವರು ದೇವರುಗಳ ಸಾಲಿನಲ್ಲಿ ಸೇರುತ್ತಾರೆಂಬ ನಂಬಿಕೆಯಿಂದ ಸತ್ತವರ ಮೂರ್ತಿ ಅಥವಾ ಭಾವಚಿತ್ರಗಳನ್ನು ಮಾಡಿಸಿ ಮನೆಗಳಲ್ಲಿಟ್ಟು ಪೂಜಿಸುವ ಪದ್ಧತಿ ಇದ್ದಿತು. ಆದರೆ ಈಗ ಈ ಎಲ್ಲಾ ಪದ್ಧತಿ ಕಡಿಮೆಯಾಗಿ ಸತ್ತವರ ಹೆಸರಿನಲ್ಲಿ ತಾಮ್ರ, ಕಂಚು ಅಥವಾ ಹಿತ್ತಾಳೆ ಚೆಂಬು ಮತ್ತು ಮಣ್ಣಿನ ಮಗಿಯನ್ನು ಅಜ್ಜ ಅಜ್ಜಿಯೆಂದು ಭಾವಿಸಿ ತಾಮ್ರದ ಚೆಂಬು ಗಂಡೆಂದು, ಮಣ್ಣಿನ ಮಗಿ ಹೆಣ್ಣೆಂದು ಭಾವಿಸಿ ಇವುಗಳ ಕೆಳಗೆ ನಿಧಿಹಾಕಿ ಗದ್ದುಗೆ ಮಾಡಿ ನೀರು ತುಂಬಿಟ್ಟು ಚೆಂಬನ್ನು ಬಲಭಾಗಕ್ಕೆ ಮಗಿಯನ್ನು ಎಡಭಾಗಕ್ಕಿಟ್ಟು ಅವುಗಳ ಕಂಠಕ್ಕೆ ಅಂಗನೂಲಿನ ಕಂಕಣ ಕಟ್ಟಿ, ಮಗಿ ಮತ್ತು ಚೆಂಬುಗಳ ಮೇಲಿನ ಬಾಯಿಗೆ ವೀಳ್ಯೆಯದ ಎಲೆ, ತೆಂಗಿನಕಾಯಿಯನ್ನು ಜೋಡಿಸಿ, ಕುಂಭ ಕಳಶ ತಯಾರಿಸಿ ಹೊಸ ಬಟ್ಟೆ ಮತ್ತು ಒಡವೆಗಳನ್ನು ತೊಡಿಸುತ್ತಾರೆ. ಇವರು ಜೀವಂತವಾಗಿದ್ದಾಗ ಬಳಸುತ್ತಿದ್ದ ಬಿಲ್ಲು, ಬಾಣ, ಭರ್ಚಿ, ಕತ್ತಿ-ಕಠಾರಿ, ಚಾಕು, ಗಂಡುಗೊಡಲಿ, ಉಳಿ, ಬಾಚ್ಚಿ, ಕೊಡಲಿ, ಕುಡುಗೋಲು ಮೊದಲಾದ ಆಯುಧಗಳನ್ನು ಪಕ್ಕ ಇಟ್ಟು ಎಲೆ ಅಡಿಕೆ, ತಂಬಿಟ್ಟು, ತೆಂಗಿನಕಾಯಿ, ಬಾಳೆ ಹಣ್ಣು, ಹಬ್ಬಕ್ಕೆ ಮೀಡಿದ ಮೀಸಲು ಅಡಿಗೆಯ ಹುಗ್ಗಿ ಅನ್ನ ಸಾರು ಮೊದಲಾದ ಆಹಾರ ಪದಾರ್ಥಗಳನ್ನು ಎಡೆ ಹಾಕುತ್ತಾರೆ. ಅವರು

ಜೀವಂತವಾಗಿದ್ದಾಗ ಬಳಸುತ್ತಿದ್ದ, ತಿನ್ನುತ್ತಿದ್ದ ಆಹಾರ ಪದಾರ್ಥಗಳನ್ನು ಹಿರಿಯರ ಪೂಜೆಗೆ ಇಡುವ ಪದ್ಧತಿ ಕಂಡುಬರುತ್ತದೆ. ಎಲೆ ಅಡಿಕೆ, ಹೊಗೆಸೊಪ್ಪು, ಹೊಗೆ ಪುಡಿ, ಬೀಡಿ, ಭಂಗಿ, ಹಣ, ಬೆಳ್ಳಿ, ಬಂಗಾರ, ಸಿಹಿತಿನಿಸುಗಳನ್ನು ಇಟ್ಟು, ಕಳಶ ಹೂಡಿ ಪೂಜೆ ಮಾಡಿ ಧೂಪ ಹಾಕುತಾರೆ.

ಸತ್ತುಹೋದ ಆತ್ಮಗಳು ಆ ದಿನ ರಾತ್ರಿ ಮನೆಗೆ ಬಂದು ಅವರಿಗೆ ಇಷ್ಟವಾದ ಪದಾರ್ಥಗಳನ್ನು ತಿಂದು ತಾಂಬೂಲ ಹಾಕಿಕೊಂಡು ಹೋಗುತ್ತಾರೆ ಎಂಬ ನಂಬಿಕೆ ಈ ಸಮುದಾಯದಲ್ಲಿರುವುದು ಕಂಡುಬರುತ್ತದೆ. ದಸರಾ ಹಬ್ಬದಲ್ಲಿ ಹಿರಿಯರನ್ನು ಆಚರಿಸಿದರೆ, ಯುಗಾದಿ ಹಬ್ಬದಲ್ಲಿ ಸತ್ತವರ ಸಮಾಧಿಗೆ ಎಡೆ ಹಾಕಿ ಹೊಸ ಬಟ್ಟೆ ಏರಿಸಿಕೊಂಡು ಬರುತ್ತಾರೆ. ಇದನ್ನು ಅಜ್ಜ, ಅಜ್ಜಿ ಗುಡ್ಡೆಗೆ ಹೋಗಿ ಬರುವುದು ಎಂದು ಕರೆಯುತ್ತಾರೆ. ಮೊಳಕಾಲ್ಮೂರು ತಾಲ್ಲೂಕಿನ ಹೊಸಳ್ಳಿ, ವೆಂಕಟಾಪುರ ಗ್ರಾಮ ಗೊಲ್ಲರ ಹಟ್ಟಿಗಳಲ್ಲಿ ವರ್ಷಕ್ಕೆ ಎರಡು ಬಾರಿ ಅಂದರೆ ದಸರಾ ಮತ್ತು ಯುಗಾದಿ ಹಬ್ಬದಲ್ಲಿ ಹಿರಿಯರ ಹಬ್ಬ ಮಾಡುತ್ತಾರೆ. ಹಿರಿಯರಿಗೆ ಇಟ್ಟಿದ್ದ ಚೊಂಬು ಮತ್ತು ಮಗಿಯ ಕೆಳಗೆ ಹಾಕಿದ್ದ ನಿಧಿಯನ್ನು ಮರು ದಿನ ಬೆಳಿಗ್ಗೆ ಬರುವ ಕಾಡುಗೊಲ್ಲರ ದಾಸಯ್ಯರಿಗೆ ಭಿಕ್ಷೆ ನೀಡುತ್ತಾರೆ.

### ೩.೨.೬ ಆಕಳ ಹಬ್ಬ

ಮೊಳಕಾಲ್ಮೂರು ತಾಲ್ಲೂಕಿನ ಕಾಡುಗೊಲ್ಲ ಸಮುದಾಯದವರೊಂದೇ ಆಚರಿಸುವ ಹಬ್ಬವಾಗಿದೆ. ಈ ಹಬ್ಬದಲ್ಲಿ ಮಹಿಳೆ ಪ್ರಧಾನವಾಗಿದ್ದಾಳೆ. ಅಂದರೆ ಇಲ್ಲಿ ಊರಿನಿಂದ ಹೊರಡುವುದರಿಂದ ಹಿಡಿದು ಅಡವಿಯಲ್ಲಿ ಹೋಗಿ ಪೂಜೆ ಮಾಡಿಕೊಂಡು ಹಟ್ಟಿಗೆ ಬರುವವರೆಗೂ ಈಕೆಯ ಪಾತ್ರವೇ ಹೆಚ್ಚು. ದೀವಳಿಗೆ ಅಂದೆರ ದೀಪಾವಳಿಯ ಸಂದರ್ಭದಲ್ಲಿ ಆಚರಿಸುವರು. ಮೊದಲಿಗೆ ಹಟ್ಟಿಯ ಹಿರಿಯರೆಲ್ಲರೂ ತಮ್ಮತಮ್ಮ ಶಕ್ತ್ಯಾನುಸಾರವಾಗಿ ಪಟ್ಟಿಗಳನ್ನು ಹಾಕಿಕೊಂಡು ದೇವರ ಕಾರ್ಯಕ್ಕೆ ಬೇಕಾಗುವ ಸಾಮಾನುಗಳನ್ನು ತರುವರು. ಈ ಸಮುದಾಯದವರು ತಮ್ಮ ತಮ್ಮ ಕುಲದೇವರನ್ನು ಬುಟ್ಟಿಯಲ್ಲಿಟ್ಟು ಹೊತ್ತುಕೊಂಡು ತಮ್ಮ ದೇವರು ಸೂಚಿಸಿದ ಊರ ಹೊರಗಿನ ಅಡವಿಗೆ ಹೋಗುವರು. ಇಲ್ಲಿ ಮಹಿಳೆಯರು ಕಳಶಗಳನ್ನು ಹಿಡಿದುಕೊಂಡು ಮುಂದೆ ಮುಂದೆ ಹೋಗುವರು.

ಮೊದಲೇ ತುಗ್ಲಿ ಕಟ್ಟಿಗೆಯನ್ನು ಕಡಿದು ದೇವರು ಕೂಡುವ ಗೂಡಿನ ಸುತ್ತ ಕಳ್ಳೆಯನ್ನು ಹಾಕಿರುತ್ತಾರೆ. ನಂತರ ದೇವರನ್ನು ಹೊತ್ತುಕೊಂಡು ಬಂದು ಗೂಡು ಕಟ್ಟಿರುವ ಜಾಗದಲ್ಲಿ ಇಳಿಸುವರು. ನಂತರ ಮಹಿಳೆಯು ಪೂಜೆಯ ಕಾರ್ಯಕ್ರಮವನ್ನು ಮಾಡುವಳು. ಇಲ್ಲಿ ದೇವರಿಗೆ ನೈವೇದ್ಯವನ್ನು ತಯಾರಿಸಿ ನಂತರ ಆಕಳಕ್ಕೆ ಪೂಜೆಯನ್ನು ಮಾಡಿ ಕಾಯಿ ಹೊಡೆದು ಆರತಿಯನ್ನು ಬೆಳಗುವರು. ನಂತರದಲ್ಲಿ ಕರಿಯ ಕಂಬಳಿಯನ್ನು ಹಾಸಿ ಜಾಡಿ ಹಾಕುವರು. ಪೂಜೆಯಾದ ನಂತರ ಕುರಿ ಮೇಕೆ ದನಗಳನ್ನು ದೇವರ ಸುತ್ತ ಮೂರು ಸಲ ಉರುಮೆ ಬಡಿದುಕೊಂಡು ತಿರುಗಿಸಿ ಬಿಡುವರು. ಈ ದನಗಳು ಊರೊಳಗೆ ಬರುವವು. ಈ ರೀತಿ ದೇವರ ಸುತ್ತ ತಿರುಗಿಸುವುದು ಇವುಗಳ ಹಿಂಡು ಹೆಚ್ಚಾಗಲಿ ಸಮೃದ್ಧಿಯಿಂದ ಇರಲಿ ಎಂಬುದೇ ಈ ಆಕಳ ಹಬ್ಬದ ವಿಶೇಷ. ಮಹಿಳೆಯರು ತಯಾರಿಸಿದ ನೈವೇದ್ಯವನ್ನು ದೇವರಿಗೆ ಎಡೆ ಮಾಡಿ ನಂತರ ಸಮಸ್ತ ಈ ಸಮುದಾಯದವರೆಲ್ಲಾ ಊಟವನ್ನು ಮಾಡಿ, ದೇವರನ್ನು ಹೊತ್ತುಕೊಂಡು ಗಂಡುಮಕ್ಕಳು ಕುಣಿಯುತ್ತಾ ಬಂದರೆ, ಹೆಣ್ಣುಮಕ್ಕಳು ತಮ್ಮ ದೈವದ ಹಾಡುಗಳನ್ನು ಹಾಡುತ್ತಾ ಬರುವುದು ಬಹಳ ವಿಶೇಷವಾಗಿರುತ್ತದೆ.

ಎಂದೆಂದೂ ಬಗ್ಗಿದ ಗೂಡ ನಾರಿ ಮಗನಾ
ಆರ್‍ಯಾರ ಮಗನ ಕೂಡ, ಏನಡಿಗೆ ಮಾಡಬೇಕು
ಸ್ವಾರೇ ಬೊಮ್ಮಯ್ಯನ ಸ್ವಾಮಾರ ದೊಂದೊತ್ತು
ಹಾಲಡಿಗೆ ಅದಾವೀರು

ಯೀರೇನ ಈರಣ್ಣನ ಮನೆ ಗೂಡಿನ ಮುಂದೆ
ಸುದ್ದೀನ ಹವಳ ತಿರುಗ್ಯಾವ, ಏನಡಿಗೆ ಅದಾವೀರ
ಸ್ವಾರೇ ಬೊಮ್ಮಯ್ಯನ ಸ್ವಾಮಾರ ದೊಂದೊತ್ತು

ಹಾಲಡಿಗೆ ಅದಾವೀರು
ಸೂರೀದ ಮುಣಿಗಿದರೆ ಬರಲಿಲ್ಲ ಬೊಮ್ಮಯ್ಯ ಊರೀಗೆ
ಅದಾವ ಕಳಿಸ್ಯಾನೆ, ಏನಡಿಗೆ ಅದಾವೀರ
ಸ್ವಾರೇ ಬೊಮ್ಮಯ್ಯನ ಸ್ವಾಮಾರ ದೊಂದೊತ್ತು ಹಾಲಡಿಗೆ ಅದಾವೀರ

ಕರೀ ಎನ್ನ ಕಳ್ಳಿ ಬಗ್ಗಿದನು ಹಿಡಿದಿಡಿದು
ಕಾಲೀಲುನಾ ಗೂಡು ಹೊಡೆದಾರೆ, ಏನಡಿಗೆ ಅದಾವೀರ
ಸ್ವಾರೇಬೊಮ್ಮಯ್ಯನ ಸ್ವಾಮಾರ ದೊಂದೊತ್ತು ಹಾಲಡಿಗೆ ಅದಾವೀರ

ಕಾಲೀಲೀ ಗೂಡೂ ಹೊಡೆದಾರೆ ಮಾರಾನೋರು
ಹಟ್ಟೀಲಿ ಬೊಮ್ಮಯ್ಯನ ಸ್ವಾಮಾರ ದೊರಿದೊತ್ತು
ಹಾಲಡಿಗೆ ಅದಾವೀರ

ಈ ರೀತಿಯಾಗಿ ಕಾಡುಗೊಲ್ಲ ಸಮುದಾಯದ ಮಹಿಳೆಯರು ತಮ್ಮ ಕುಲದೈವದ ಹಾಡುಗಳನ್ನು ಹಾಡುತ್ತಾ ಬರುವರು. ಊರಿನ ಹೊರಗಡೆ ಮಾರಮ್ಮನ ಕಟ್ಟೆಯ ಮೇಲೆ ದೇವರನ್ನು ಇಳಿಸಿ ಮನೆಗೆ ಹೋಗಿ ಊಟ ಮಾಡಿಕೊಂಡು ಬಂದು ಪುನಃ ಗಂಡುಮಕ್ಕಳು ದೇವರನ್ನು ಹೊತ್ತುಕೊಂಡು ರಾತ್ರಿಯೆಲ್ಲಾ ಹಟ್ಟಿ ಸುತ್ತುಹಾಕಿದರೆ ಮಹಿಳೆ ಹಾಡುಗಳನ್ನು ಬೆಳಗಾಗುವವರೆಗೆ ಹಾಡುತ್ತಾ ಇರುವಳು.

### ೩.೨.೭ ಗುಗ್ಗರಿ ಹಬ್ಬ

ಮಾಘ ಮಾಸದಲ್ಲಿ ಆಚರಿಸುವ ಕಾಳೆ ಹಬ್ಬವನ್ನು ಕಾಡುಗೊಲ್ಲರು ಗುಗ್ಗರಿ ಹಬ್ಬವೆಂದೇ ಕರೆಯುತ್ತಾರೆ. ಸಾಮಾನ್ಯವಾಗಿ ಈ ಬುಡಕಟ್ಟು ಸಮುದಾಯ ಹಬ್ಬದ ದಿನ ಹಟ್ಟಿಯಿಂದ ಹೊರಗೆ ತಾತ್ಕಾಲಿಕವಾಗಿ ಬೆರಗು ಅಥವಾ ಕಳ್ಳೆ ಪೌಳಿಯನ್ನು ಕಟ್ಟಿ ಅದರ ಮಧ್ಯೆ ಹಂಚಿ ಹುಲ್ಲುಗುಡಿಸಲನ್ನು ಕಟ್ಟಿ ಅದರಲ್ಲಿ ದೇವರನ್ನು ಇಟ್ಟು ಹಬ್ಬದ ಕಾರ್ಯಕ್ರಮವನ್ನು ಮಾಡುತ್ತಾರೆ. ಇದೆಲ್ಲವನ್ನು ಪುರುಷರು ಮಾಡಿದರೆ ಇನ್ನುಳಿದ ಕೆಲಸವನ್ನು ಈ ಸಮುದಾಯದ ಮಹಿಳೆಯರೇ ಗುಗ್ಗರಿ ಮಾಡುವ, ನೈವೇದ್ಯ ಮಾಡುವ ಪಂಚಕಳಶದಾರತಿಯನ್ನು ಹಿಡಿದು ತ್ರಿಪದಿಯ ಮೂಲಕ ಹಾಡುಗಳನ್ನು ಹಾಡುವರು.

ಒಂದೊಂದು ಸಮುದಾಯದ ಬೆಡಗಿನ ಅಣ್ಣತಮ್ಮಂದಿರು ತಮ್ಮ ಹೊಲ ಗದ್ದೆಗಳಲ್ಲಿ ಬೆಳೆದಿರುವ ಹೊಸ ದವಸ ಧಾನ್ಯಗಳನ್ನು ಅದರಲ್ಲೂ ಹುರುಳಿ ಮತ್ತು ಅಕ್ಕಿಯನ್ನು ಬಹಳ ಭಯ ಭಕ್ತಿಯಿಂದ ತಮ್ಮ ದೇವರಿಗೆ ಒಪ್ಪಿಸುತ್ತಾರೆ. ನಂತರ ಮಹಿಳೆಯರು ಉಪ್ಪು ಹಾಕದೆ 'ಬಾಯಿಬತ'ದ (ಅಂದರೆ ಬಾಯಿಗೆ ಬಟ್ಟೆಕೊಂಡು) ಮೂಲಕ ಗುಗ್ಗರಿಯನ್ನು ಬೇಯಿಸಿ ತಳಿಗೆ ಅನ್ನ ಮಾಡಿ ದೇವರಿಗೆ ಎಡೆಯನ್ನು ಮಾಡುವಲ್ಲಿ ಮಹಿಳೆಯ ಪಾತ್ರ ತುಂಬಾ ಪ್ರಮುಖವಾದದ್ದು.

ಮೊಳಕಾಲ್ಮೂರು ತಾಲ್ಲೂಕಿನಿಂದ ಹೊಸಳ್ಳಿ ಗ್ರಾಮದ ಗೊಲ್ಲರ ಹಟ್ಟಿ ಸುಮಾರು ೩೫ ಕಿ.ಮೀ. ದೂರದಲ್ಲಿದೆ. ಇವರು ಈರಣ್ಣ, ಚಿತ್ತಯ್ಯ, ಬೊಮ್ಮಯ್ಯ, ಎಂಬ ದೇವರುಗಳನ್ನು ಪ್ರಮುಖವಾಗಿಟ್ಟುಕೊಂಡು ಗುಗ್ಗರಿ ಹಬ್ಬವನ್ನು ಬಹಳ ವಿಜೃಂಭಣೆಯಿಂದ ಆಚರಿಸುತ್ತಾರೆ. ಇವರು ಊರಿನಿಂದ ಹೊರಗೆ ಪೂರ್ವಕ್ಕೆ ಲಕ್ಕಿ ಸೊಪ್ಪಿನಿಂದ ಬೆರಗು ಕಟ್ಟಿ ತಾವು ಹೊತ್ತು ಕೊಂಡು ಹೋದ ದೇವರನ್ನಿಟ್ಟು ಕೊಳ್ಳಿಗಳ ಬೆಳಕಿನಲ್ಲಿ ಗುಗ್ಗರಿ ಹಬ್ಬವನ್ನು ಆಚರಿಸುವರು. ಗುಗ್ಗರಿ ಹಬ್ಬವು ಗಂಗೆಯ ಪೂಜೆಯನ್ನು ಮಾಡಿಕೊಂಡು ಬರುವುದರ ಮೂಲಕ ಆರಂಭವಾಗುತ್ತದೆ. ಮೊದಲಿಗೆ ಶುಕ್ರವಾರದಂದು ಗುಂಡೇರಹಳ್ಳಕ್ಕೆ ಹೋಗಿ ಚಿಲುಮೆಯನ್ನು ತೋಡಿ ಅಲ್ಲಿ ಗಂಗೆಯ ಪೂಜೆಯನ್ನು ಮಾಡಿಕೊಂಡು ಬರುವಾಗ ಮಹಿಳೆಯರು ತ್ರಿಪದಿಗಳ ಹಾಡುಗಳು ತಮ್ಮ ದೇವರುಗಳಾದ ಈರಣ್ಣ, ಬೊಮ್ಮಯ್ಯ, ಚಿತ್ತಯ್ಯ ಇವುರಗಳ ಮೇಲೆ ಪದ ಕಟ್ಟಿ ಹಾಡು ಹಾಡುವಂತದ್ದು ಕೇಳುಗರ ಮನಸ್ಸನ್ನು ಸೂರೆಗೊಳಿಸುವಂಥದ್ದಾಗಿರುತ್ತದೆ.

ಎದ್ದು ಬಾ ಮುದ್ದು ಈರ
ಬೆಳ್ಳಿಯ ಗೆಜ್ಜೆ ಮಾತಾಡೋತಾವೊ
ಮುದ್ದೀನ ಹೊಂಬಾಳೆ ವದನಾಗೆ ಹಾಡೋವೊ
ರದ್ದೂರ ನಿಮ್ಮವರ... ಹೇಳಾ ಮಾಡ್ಯಾವೇ
ಎದ್ದು ಬಾ ಮುದ್ದು ಈರ
ಬೆಳ್ಳಿಯ ಗೆಜ್ಜೆ ಮಾತಾಡೋತಾವೊ

ಈ ರೀತಿಯಾಗಿ ಹಟ್ಟಿಯ ಹಿರಿಯ ಮಹಿಳೆಯರು ಹಾಡುತ್ತಾ ದೇವರ ಹಿಂದೆ ಹಿಂದೆ ಬಂದರೆ ಮಧ್ಯದಲ್ಲಿ ದೇವರು ಹೊತ್ತವರು ಮುಂದುಗಡೆ ಕಳಶವನ್ನು ಹಿಡಿದ ಮುತ್ತೈದೆಯರು ಗಂಗೆಯನ್ನು ತೆಗೆದುಕೊಂಡು ಬರುವರು. ಅದೇ ದಿನವೇ ದೀಪೋತ್ಸವ-ಕಾರ್ಯಕ್ರಮವನ್ನು ಮತ್ತು ದೇವರುಗಳಿಗೆ ಕಂಕಣ ಕಟ್ಟುವುದನ್ನು ಮಾಡುವರು. ಶುಕ್ರವಾರದ ಮೂರನೆಯ ದಿನ ಶನಿವಾರದಂದು ಹಟ್ಟಿಯ ಹೊರಗೇ ಇರುವ ಕುಂಬಾರನು ತಂದ ಗಡಿಗೆಗಳನ್ನು ತೆಗೆದುಕೊಂಡು ಹೋಗಿ ಅಂದಿನ ರಾತ್ರಿ ಪುನಃ ಊರ ಹೊರಗೆ ಇರುವ ಬಾವಿಯಲ್ಲಿ ಈ ಐದು ಗಡಿಗೆಗಳಲ್ಲಿ ನೀರನ್ನು ಹಾಕಿ ತೊಳೆದು ನೀರನ್ನು ತುಂಬಿಟ್ಟು ಗಂಗೆಯ ಪೂಜೆಯನ್ನು ಮಹಿಳೆಯು ಮಾಡಿ ನೀರು ತರುತ್ತಾರೆ. ಅಂದೇ ಸುಮಾರು ಮೂರು ಗಂಟೆಯ ರಾತ್ರಿ ಸಮಯದಲ್ಲಿ ಒಲೆ ಗುಂಡುಗಳನ್ನು ಕ್ರಮವಾಗಿ ಐದರ ಸಂಖ್ಯೆಯಲ್ಲಿಟ್ಟು ಒಂದೊಂದು ಒಲೆಯ ಮೇಲೆ ಐದು ಗಡಿಗೆಗಳಲ್ಲಿ ಅವರೆ ಕಾಳು, ಹಸುವಿನ ಹಾಲು, ಎಳ ನೀರು, ಜೇನು ತುಪ್ಪ, ತುಪ್ಪ, ಬಾಳೆ ಹಣ್ಣುಗಳನ್ನು ಹಾಕಿ ಬೇಯಿಸುವರು. ಈ ಆಚರಣೆಯಲ್ಲಿ ಮಹಿಳೆಯ ಪಾತ್ರವೇ ಅಧಿಕವಾಗಿರುತ್ತದೆ. ಗಡಿಗೆಯಲ್ಲಿರುವ ಪದಾರ್ಥಗಳು ಕುದಿಯುವ ಹಾಗೆ 'ಬಾಯಿಬತ'ದ ಮೂಲಕ ತನ್ನ ಕಾಯಕವನ್ನು ಮಹಿಳೆಯು ನಿಷ್ಠೆಯಿಂದ ಮಾಡುವಳು. ಒಂದೊತ್ತಿನಿಂದಿದ್ದು ಬಿಳಿ ವಸ್ತ್ರವನ್ನುಟ್ಟ ಪಟ್ಟದ ಪೂಜಾರಿಯ ಹೆಂಡತಿ ಗಡಿಗೆಗಳ ಮುಂದೆ ಪೂರ್ವಾಭಿಮುಖವಾಗಿ ನಿಂತುಕೊಳ್ಳುತ್ತಾಳೆ. ಇದಕ್ಕೆ ಅಡ್ಡಲಾಗಿ ಬಂದಳಿಕೆ, ಹೊಂಗೆ, ಲಕ್ಕೆ ಸೊಪ್ಪಿನಿಂದ ಮರೆಯನ್ನು ಮಾಡಿರುತ್ತಾರೆ. ಅನಂತರ ಅವರೆ ಕಾಳು ಬೆಂದ ಮೇಲೆ ದೇವರ ಪೂಜಾರಿ ಬಂದು ಮಣ್ಣಿನ ಮಡಿಕೆಗೆ ಪೂಜೆ ಮಾಡಿದ ಮೇಲೆ 'ಗುರುತಾಯಿ' ಕುದಿಯುವ ಮಣ್ಣಿನ ಗಡಿಗೆಯಲ್ಲಿ ಮೂರು ಸಾರಿ ಕೈಯನ್ನಿಟ್ಟು ಅವರೆ ಕಾಳನ್ನು ತಿರುವಿ ತೋರಿಸುತ್ತಾಳೆ. ಈ ದೃಶ್ಯ ಬಹಳ ರೋಮಾಂಚನಕಾರಿಯಾದುದರಿಂದ ಭಕ್ತಾದಿಗಳು ಕುತೂಹಲದಿಂದ ವೀಕ್ಷಿಸುತ್ತಿರುತ್ತಾರೆ. ಈ ರೀತಿ ಮಾಡುವ ಪದ್ಧತಿಗೆ 'ಸೌರ ಇಳಿಸುವುದು' ಎಂದು ಕರೆಯುವರು.

ಈ ರೀತಿಯಾಗಿ ದೇವರ ಕಾರ್ಯಕ್ರಮಗಳನ್ನು ಇಡೀ ರಾತ್ರಿಯೆಲ್ಲಾ ಮಾಡಿದರೂ ಸಹ ಯಾವುದೇ ಕಾರಣಕ್ಕೂ ಲೈಟ್ ಹಚ್ಚದೆ ಕೇವಲ ಪಂಜುಗಳ ಬೆಳಕಿನಲ್ಲೇ ಮಾಡುವರು. ಒಂದು ವೇಳೆ ಲೈಟ್ ಬಳಸಿದರೆ ತಮ್ಮ ದೇವರುಗಳ ಶಕ್ತಿ ಕುಂದುತ್ತದೆ ಎಂಬ ಬಲವಾದ ನಂಬಿಕೆಯೇ ಇದಕ್ಕೆ ಕಾರಣ. ಈ ಹಬ್ಬದ ಆಚರಣೆಯಲ್ಲಿ ಮಹಿಳೆಯನ್ನು ಅತ್ಯಂತ ಭಕ್ತಿ ಗೌರವಗಳಿಂದ ಕಾಣುವರು. ಇದಕ್ಕೆ ಪಟ್ಟದ ಪೂಜಾರಿಯ ಹೆಂಡತಿಯಾದ 'ಗುರುತಾಯಿ'ಯೇ ಸಾಕ್ಷಿ. ಬೆಳಗಿನ ಜಾವ 'ಸೌರ ಇಳಿಸಿದ' ನಂತರ ಭಾನುವಾರ ಮುಂಜಾನೆ ಸೂರ್ಯಮುಕ್ಕು ಸಂಪ್ರದಾಯವನ್ನು ಮಾಡುವರು. ಪೂರ್ವದಿಕ್ಕಿನಲ್ಲಿ ಶಮೀವೃಕ್ಷದ ಹತ್ತಿರ ಸಕಲ ವಾದ್ಯಗಳೊಂದಿಗೆ ದೇವರ ಪೂಜಾರಿಗಳು ಮಡಿಯಿಂದ ಬಿಳಿ ಪಂಚೆಯನ್ನುಟ್ಟುಕೊಂಡು ಹೋಗಿ ಸೂರ್ಯ ನಾರಾಯಣನಿಗೆ ಬಾಳೆ ಎಲೆಯಲ್ಲಿ ಅವರೆ ಕಾಳು, ಆಕಳದ ಹಾಲು, ತುಪ್ಪ, ಬಾಳೆಹಣ್ಣುಗಳನ್ನಿಟ್ಟು ಎಡೆ ಹಾಕಿ ಪೂಜೆ ಸಲ್ಲಿಸಿ ತದನಂತರ ಬನ್ನಿ ಮರದ ಪಕ್ಕದಲ್ಲಿ ನೆಲವನ್ನು ಮುಟ್ಟಿ ಪೂರ್ವಕ್ಕೆ ಮೂರು ಹೆಜ್ಜೆ ಮತ್ತು ಪಶ್ಚಿಮಕ್ಕೆ ಮೂರು ಹೆಜ್ಜೆ ಹಾಕಿ ಭೂಮಿ ತಾಯಿಯನ್ನು ಮುಟ್ಟಿ ಉದಯಿಸುತ್ತಿರುವ ಸೂರ್ಯನಿಗೆ ನಮಸ್ಕರಿಸುತ್ತಾರೆ. ಶಮೀ ವೃಕ್ಷದಿಂದ ವಾಪಾಸು ಬರುವಾಗ ದೇವಸ್ಥಾನದ ಭಕ್ತಾದಿಗಳು ಹರಕೆ ಮಾಡಿಕೊಂಡು ದೇವಸ್ಥಾನದ ಹತ್ತಿರ ಬಿಳಿ ವಸ್ತ್ರಗಳನ್ನುಟ್ಟುಕೊಂಡು ದಾರಿಗೆ ಅಡ್ಡಲಾಗಿ ಮಲಗಿ ಕೊಂಡಿರುತ್ತಾರೆ. ಆಗ ದೇವರ ಪೂಜಾರಿಯು ಆವೇಶದಿಂದ ಒಬ್ಬೊಬ್ಬರನ್ನು ದಾಟುತ್ತಾ ತುಳಿಯುತ್ತಾ ಮುಂದೆ ಸಾಗಿ ಬರುವನು. ಯಾವ ವ್ಯಕ್ತಿಯನ್ನು ತುಳಿಯುತ್ತಾನೆಯೋ ಆ ವ್ಯಕ್ತಿಗೆ ಒಂದು ತೆಂಗಿನ ಕಾಯಿಯನ್ನು ಆಶೀರ್ವಾದ ರೂಪವಾಗಿ ಪೂಜಾರಿಗಳು ಕೊಡುವರು. ದೇವರು ಹೊತ್ತು ಕೊಂಡಿರುವ ಪೂಜಾರಿಯು

ಮಲಗಿದವರನ್ನು ತುಳಿಯುದೇ ಹೋದರೆ ತಮ್ಮ ಬಯಕೆಯ ಫಲಗಳು ಯಶಸ್ವಿಯಾಗುತ್ತವೆಂಬುದು ಇಲ್ಲಿಯ ಜನರ ಬಲವಾದ ನಂಬಿಕೆಯಾಗಿದೆ.

ಸೂರ್ಯಮುಕ್ಕುಗೆ ಹೋಗಿ ಬಂದ ಮೇಲೆ ದೊರೆಗಳ ಜೇಷ್ಠ ಪುತ್ರ ಗುರುತಾಯಿಗೆ ಕಾಸು ಒಪ್ಪಿಸುವ ಆಚರಣೆ ಇರುತ್ತದೆ. ಇದು ಒಂದು ರೀತಿ ತಪ್ಪು ಒಪ್ಪುಗಳನ್ನು ಒಪ್ಪಿಕೊಳ್ಳುವುದರ ಸಂಕೇತವಾಗಿರುತ್ತದಲ್ಲದೆ ಧರ್ಮವನ್ನು ಪರಿಪಾಲಿಸಿಕೊಂಡು ಹೋಗುತ್ತಾನೆ ಎಂದು ಹೇಳುವುದರ ಸಂಕೇತವಾಗಿದೆ. ನಂತರ ದಾಸೋಹ ಕಾರ್ಯಕ್ರಮ, ಜವಳ ತೆಗೆಸುವುದು, ಆಕಳ ಪೂಜೆ ಮಾಡುವುದು, ದನಗಳನ್ನು ಕಾದಿರುವ 'ಕಿಲಾರಿ'ಗೆ ಕಾಸು ಹಾಕುವುದು, ದೇವರ ಎತ್ತುಗಳನ್ನು ಓಡಿಸುವುದು, ಮೆರವಣಿಗೆ ಮಹಾ ಮಂಗಳಾರತಿಯೊಂದಿಗೆ ಗುಗ್ಗರಿ ಹಬ್ಬದ ಕಾರ್ಯಕ್ರಮ ಮುಗಿಯುತ್ತದೆ.

ಒಟ್ಟಾರೆಯಾಗಿ ಈ ಗುಗ್ಗರಿ ಹಬ್ಬದಲ್ಲಿ ಕಾಡುಗೊಲ್ಲ ಸಮುದಾಯದ ಮಹಿಳೆಗೆ ಬಹಳ ಪ್ರಾಮುಖ್ಯತೆ ಇದೆ. ಏಕೆಂದರೆ ಈ ಹಬ್ಬದಲ್ಲಿ ಪ್ರತಿಯೊಂದು ಕಾರ್ಯಕ್ರಮ ದೇವರನ್ನು ಹೊರುವುದು ಬಿಟ್ಟರೆ ಉಳಿದೆಲ್ಲವೂ ಈ ಮಹಿಳೆಯೇ ಮಾಡುವಳು. ಇವಳಿಲ್ಲದಿದ್ದರೆ ಕಾರ್ಯಕ್ರಮವೇ ಇಲ್ಲವೆನ್ನಬಹುದು. ಗುಗ್ಗರಿ ಹಬ್ಬ ಕಾಡುಗೊಲ್ಲರಿಗೆ ತಮ್ಮ ತಪ್ಪು ಒಪ್ಪುಗಳನ್ನು ತಿದ್ದಿಕೊಂಡು ಉತ್ತಮ ರೀತಿಯಲ್ಲಿ ಬಾಳಲು ಇಚ್ಛಿಸುವವರೆಗೆ ಗುಗ್ಗರಿ ಹಬ್ಬ ವರದಾನವಾಗಲಿದೆ. ಸೌರ ಇಳಿಸುವ ಕಾರ್ಯಕ್ರಮದಲ್ಲಿ ಮಹಿಳೆಯ ನಿಷ್ಠೆ, ಅಚಲವಾದ ಭಕ್ತಿ, ನಿರ್ಮಲವಾದ ಹೃದಯ, ಸಹನೆ, ತ್ಯಾಗ ಮೊದಲಾದ ಆದರ್ಶ ಗುಣಗಳನ್ನು ಎತ್ತಿ ತೋರಿಸುವಲ್ಲಿ ಈ ಕಾಡುಗೊಲ್ಲ ಮಹಿಳೆ ಯಶಸ್ವಿಯಾಗಿದ್ದಾಳೆ.

### ೩.೨.೮ ಕರಿಯಮ್ಮನ ಹಳ್ಳಿ ಮಾರೆಮ್ಮ

ಮೊಳಕಾಲ್ಮೂರು ತಾಲ್ಲೂಕಿನಿಂದ ೧೮ ಕಿ.ಮೀ. ಅಂತರದಲ್ಲಿರುವ ನಾಗಸಮುದ್ರ ಗ್ರಾಮದ ಕಾಡುಗೊಲ್ಲರ ಹಟ್ಟಿಯ ಕಾಡುಗೊಲ್ಲರು ಮಾತ್ರ ಆಚರಿಸುವಂತಹ ಒಂದು ಜಾತ್ರೆಯಾಗಿದೆ. ದವನದ ಹುಣ್ಣಿಮೆಯಾದ ಒಂದು ವಾರಕ್ಕೆ ಈ ಜಾತ್ರೆಯನ್ನು ಮಾಡುವರು. ಸಮುದಾಯದ ಮಹಿಳೆಯರೆಲ್ಲರೂ ತಮ್ಮ ತಮ್ಮ ಮನೆಗಳ ನೆಲ ಕಾರಣೆ ಮಾಡಿಕೊಂಡು ಮನೆಗಳಿಗೆ ಸುಣ್ಣ ಬಣ್ಣವನ್ನು, ಗುಡಿಸಲುಗಳಿಗೆ ಕೆಮ್ಮಣ್ಣು, ಸುಣ್ಣದಿಂದ ಸ್ವಚ್ಛಮಾಡಿಕೊಂಡು ಈ ದೇವಿಗೆಂದು ರಾಂಪುರಕ್ಕೆ ಬಂದು ಹೊಸ ಸೀರೆ, ಕುಂಕುಮ, ಬುಕ್ಕಿಟ್ಟು, ಹಸಿರು ಬಳೆಗಳು, ಹೊಂಬಾಳೆ, ಬೆಲ್ಲ, ಹೊಸ ಬಿದಿರಿನ ಪುಟ್ಟಿ ಮತ್ತು ಒಂದ ಹೊಸ ಗಡಿಗೆ, ಧೂಪಕ್ಕೆ ಬೇಕಾಗುವ ಸಾಮ್ರಾಣಿ, ಊದಿನಕಡ್ಡಿ, ಕಾಯಿ ಕರ್ಪೂರ ಇವೆಲ್ಲವುಗಳನ್ನು ತಂದು ಮನೆಯಲ್ಲಿಟ್ಟುಕೊಳ್ಳುವರು. ಇದೆಲ್ಲದೂ ಈ ಕಾಡುಗೊಲ್ಲ ಮಹಿಳೆಯ ಕೆಲಸವಾಗಿದೆ.

ಊರಿನಿಂದ ದಕ್ಷಿಣ ದಿಕ್ಕಿನ ಕೆರೆಯ ಅಂಗಳದಲ್ಲಿ ಸಮಸ್ತ ಕಾಡುಗೊಲ್ಲ ಸಮುದಾಯದ ಮುತ್ತೈದೆಯರು ಆರತಿಗಳನ್ನು ಹಿಡಿದುಕೂಂಡು ಹಾಡುಗಳನ್ನು ಹಾಡುತ್ತಾ ಪೂಜಾರಿ ಮತ್ತು ಹಟ್ಟಿಯ ಜನರೆಲ್ಲರೂ ಬಂದು ಪೂಜಾರಿಯ ಅಣತಿಯಂತೆ ಚಿಲುಮೆಯನ್ನು ತೋಡುವರು. ಚಿಲುಮೆಯಲ್ಲಿ ನೀರು ಬಂದ ತಕ್ಷಣ ಮಹಿಳೆಯರು ಗಂಗೆಯ ಪೂಜೆಯನ್ನು ಮಾಡುವರು. ಅಲ್ಲಿಯೇ ಈ ಮಾರಮ್ಮ ತಾಯಿಯನ್ನು ಕೂರಿಸಲಿಕ್ಕೆ ಮಣೇವು ಹಾಕಿ ಇಡುವರು. ಕರಿಯ ಕಂಬಳಿಯ ಗದ್ದುಗೆಯ ಮೆಲೆ ನೂರಾ ಒಂದು ಎಲೆ, ನೂರಾ ಒಂದು ಅಡಿಕೆ, ನೂರಾ ಒಂದು ಹಸಿಟ್ಟು, ನೂರಾ ಒಂದು ಚಿಗಳೆ, ತಂಬಿಟ್ಟು, ತೆಂಗಿನಕಾಯಿ ಇವೆಲ್ಲವುಗಳನ್ನಿಟ್ಟು ಪೂಜೆ ಮಾಡಿ ಕಾಯಿ ಹೊಡೆದು ಹೊಲಗಳಲ್ಲಿ ಕರೆದು ಕೊಂಡು ಹೋಗಿ ಮಾರೆಮ್ಮ ಮತ್ತು ಗಂಗಮ್ಮಳನ್ನು ಹೊಸ ಗಡಿಗೆಯಲ್ಲಿ ತುಂಬಿಕೊಂಡು ಇವರಿಬ್ಬರ ಮೇಲೆ ಹಾಡುಗಳನ್ನು ಹಾಡುತ್ತಾ ಊರಿನ ಕಡೆಗೆ ಬರುವರು.

ಈ ಕಾಡುಗೊಲ್ಲ ಸಮುದಾಯದ ತಮ್ಮದೇ ಆದ ಒಂದು ಸಂಪ್ರದಾಯವನ್ನು ಇಲ್ಲಿ ವಿಶಿಷ್ಟ ರೀತಿಯಲ್ಲಿ ಆಚರಿಸುವರು. ಮಾರೆಮ್ಮ ಮತ್ತು ಗಂಗಮ್ಮ ಇವರಿಬ್ಬರನ್ನು ಅರ್ಧ ದಾರಿಗೆ ಕರೆದುಕೊಂಡು ಬಂದ ನಂತರ 'ಧೂಳು ಮರಿ' ಎಂದು ಕರೆಯಲ್ಪಡುವ ಕುರಿ ಮರಿಯೊಂದನ್ನು ಈ ದೇವಿಯರಿಗೆ ನಿವಾಳಿಸಿ, ಅದನ್ನು ಮಧ್ಯಭಾಗದಲ್ಲಿ ಕಡಿಯುವರು. ಈ ರೀತಿಯಾಗಿ ಕಡಿದ ಕುರಿಯ ಮಾಂಸವನ್ನು ಸಂಪೂರ್ಣವಾಗಿ ಪಂಜನ್ನು ಓಡಿದಿರುವಂತಹ ಮಡಿವಾಳರಿಗೆ ಕೊಡುವರು. ಪುರುಷರೆಲ್ಲರೂ ಕೇಕೆ ಹಾಕುತ್ತಾ ಕುಣಿದು ಕೊಂಡು ಬಂದರೆ

ಇಲ್ಲಿ ಮಹಿಳೆಯರು ಹಾಡುಗಳನ್ನು ಹಾಡುತ್ತಾ ಬರುವರು. ದೇವಿಯನ್ನು ಮತ್ತು ಗಂಗಮ್ಮನನ್ನು ಹಟ್ಟಿಯ ಹುದಿಗೆ ಕರೆದುಕೊಂಡು ಬಂದ ಮೇಲೆ ಈರುಳ್ಳಿ ಮತ್ತು ಕರಿಕುಂಬಳ ಕಾಯಿಯಿಂದ ಪುನಃ ನಿವಾಳಿಸಿ ತೆಗೆದುಹಾಕಿ ದೇವಿಯನ್ನು ಹಟ್ಟಿಯ ಒಳಗೆ ಕರೆದುಕೊಳ್ಳುವರು.

ಈ ಜಾತ್ರೆಯ ಸಂದರ್ಭದಲ್ಲಿ ಸೂತಕದ ವಿಷಯದಲ್ಲಿ ಬಹಳಷ್ಟು ಕಟ್ಟುನಿಟ್ಟಿನ ಕ್ರಮವನ್ನು ಕೈಕೊಳ್ಳುವರು. ಆ ಉದ್ದೇಶಕ್ಕಾಗಿ ಇವರು ಈ ಹಬ್ಬವನ್ನು ಗೋಮೂತ್ರವನ್ನು ಹಾಕಿಕೊಂಡು ಬರುವುದರಿಂದ ತಮ್ಮ ಪಾವಿತ್ರ್ಯತೆಯನ್ನು ಕಾಪಾಡಿಕೊಳ್ಳುವರು. ಈ ಉದ್ದೇಶಕ್ಕಾಗಿಯೇ ಕಾಡುಗೊಲ್ಲ ಸಮುದಾಯದ ಜನರು ಊರಿನ ಜನರ ನೆರಳು ಬೀಳಬಾರದು ಎಂದು ತಡವಾಗಿಯೇ ಈ ಹಬ್ಬವನ್ನು ಆಚರಿಸುವರು.

# ಅಧ್ಯಾಯ ನಾಲ್ಕು

# ಸಮಕಾಲೀನ ಸಂದರ್ಭದಲ್ಲಿ ಗೊಲ್ಲಮಹಿಳೆಯ ಸಮಷ್ಠಿ ಪ್ರಜ್ಞೆ

**ಮಾ**ನವನ ಇತಿಹಾಸ ಸಾವಿರಾರು ವರ್ಷಗಳಷ್ಟು ಹಳೆಯದು. ಈ ಬೆಳವಣಿಗೆಯಲ್ಲಿ ಮಹಿಳೆ ಪುರುಷನ ಸಂಗಾತಿಯಾಗಿದ್ದಾಳೆ. ಅವನ ಸುಖ ದುಃಖಗಳ ಅಭಿವೃದ್ಧಿ ಸಾಧನೆಗಳ ಮಾನ್ಯತೆಗಳಲ್ಲಿ ಅವಳ ಬೆಂಬಲವಿದೆ. ಆದರೆ ಮಹಿಳೆಯನ್ನು ಪುರುಷನೇ ಶೋಷಿತೆಯನ್ನಾಗಿ ನೋಡುವುದೊಂದು ವಿಪರ್ಯಾಸದ ಸಂಗತಿ. ಗಂಡು-ಹೆಣ್ಣಿನ ನಡುವೆ ಇಂತಹ ಅಸಮಾನತೆ ಉಂಟಾಗಲು ಕಾರಣವೇನು? ಎಂಬ ಪ್ರಶ್ನೆಗೆ ಉತ್ತರವನ್ನು ಇಂದಿಗೂ ಹುಡುಕಲಾಗುತ್ತಿದೆ. ಮಹಿಳೆ ತನ್ನ ಹೆಂಡತಿ (ಹೆಣ್ತನ) ಎಂಬ ಶಾರೀರಿಕ ರಚನೆಯಿಂದಾಗಿ ಪುರುಷನ ಸಂತಾನವನ್ನು ಕಾಪಾಡುವ ಸಿದ್ಧಪಾತ್ರಳಾಗಿ ಶೋಷಿತೆಯಾದಳೆಂಬುದು ಒಪ್ಪತಕ್ಕ ಅಭಿಪ್ರಾಯವಲ್ಲ. ಅಥವಾ ತಾನು ಬಲಶಾಲಿ ವೀರ್ಯವಂತನಾದ್ದರಿಂದ ಮಹಿಳೆಯನ್ನು ದ್ವಿತೀಯ ಸ್ಥಾನಕ್ಕೆ ಒತ್ತಾಯಪೂರ್ವಕವಾಗಿ ತಳ್ಳಿದ್ದಾನೆ ಎಂಬುದು ಸೂಕ್ತವಲ್ಲ. ಪುರುಷ ವಂಶೋದ್ಧಾರಕನೆಂಬುದರಿಂದ ಹಿಡಿದು ಯುಗಪುರುಷ ಎನ್ನಿಸಿಕೊಳ್ಳುವ ಹೆಗ್ಗಳಿಕೆಯನ್ನು ಪಡೆದರೂ ಮಹಿಳೆ ಮಕ್ಕಳನ್ನು ಪೋಷಿಸುವ ತಾಯ್ತನಕ್ಕೆ ಮಾತೃದೇವೋಭವ ಎಂಬ ಮಾತಿನ ಮಣೆಪೀಠವೇರಿದ್ದಕ್ಕೆ ಅದರಲ್ಲಿ ತನ್ನ ಜನ್ಮ ಸಾಫಲ್ಯವನ್ನು ಕಂಡುಕೊಳ್ಳುವ ಜೀವವಾಗಬೇಕೆ? ಸ್ವತಂತ್ರ, ಸಮಾನತೆ, ಜೀವನಾವಶ್ಯಕ ಹಾಗೂ ಭ್ರಾತೃತ್ವ ಇವು ಮಾನವನ ಮೂಲಭೂತ ಹಕ್ಕಾಗಿದ್ದು ಈ ಹಕ್ಕುಗಳನ್ನು ಯಾವೊಬ್ಬ ವ್ಯಕ್ತಿಗೆ ಇಲ್ಲದಂತೆ ಮಾಡಿದರೆ ಅಥವಾ ಅದನ್ನು ಹೊಂದದಂತೆ ಕ್ರೂರತನದಿಂದ ವರ್ತಿಸಿದರೆ ಮಾನವನ ಹಕ್ಕುಗಳ ಉಲ್ಲಂಘನೆ ಪುರುಷನಿಂದ ಅವ್ಯಾಹತವಾಗಿ ನಡೆಯುತ್ತಲೇ ಇದೆ.

ಪಾರಂಪರಿಕವಾಗಿ ನಡೆದು ಬಂದಿರುವ ಈ ವ್ಯವಸ್ಥಿತ ವರ್ತನೆಗೆ ಮಹಿಳೆ ಬಲಿಪಶುವಾಗಿದ್ದಾಳೆ. ಮಹಿಳೆ ತನ್ನ ಅಸ್ಮಿತೆಯನ್ನು ಪಡೆದಿದ್ದು ಸಮಾಜದ ಸಂರಚನೆ ಹಾಗೂ ಪುರುಷಾವಲಂಬಿಯಾಗಿ ಮೂಲೆ ಗುಂಪಾಗಿ ಕಾರಣವಾದ ಸನ್ನಿವೇಶಗಳು ಅಂದಿನ ಸಾಮಾಜಿಕ, ಆರ್ಥಿಕ, ಶೈಕ್ಷಣಿಕ, ಸಾಂಸ್ಕೃತಿಕ ಹಾಗೂ ರಾಜಕೀಯ ಇನ್ನಿತರ ಪರಿಸ್ಥಿತಿಗಳ ಬದಲಾವಣೆಗಳನ್ನು ಚರ್ಚಿಸುವ ಮೂಲಕ ವಿಶ್ಲೇಷಿಸುವುದು ಯುಕ್ತವಾಗುತ್ತದೆ. ಪರಂಪರೆ ಹಾಗೂ ಸಂಸ್ಕೃತಿಯ ಮೌಲ್ಯಗಳಿಗೆ ಸಂಬಂಧಪಟ್ಟಂತೆ ಸಾಂಪ್ರದಾಯಿಕ ಭಾರತೀಯ ಪರಂಪರೆಯಲ್ಲಿ ಮಹಿಳೆಯರಿಗೆ ಸ್ವತಂತ್ರ ಸ್ಥಾನವನ್ನು ನೀಡಿ ಮಾನ್ಯತೆ ನೀಡಿರುವುದನ್ನು ನಮ್ಮ ಹಿಂದಿನವರು ನಡೆದ ಹಾದಿ, ಸಾಧಿಸಿದ ಸಾಧನೆ, ಕಂಡುಕೊಂಡ ಜೀವನ ಸ್ವರೂಪ, ಒಪ್ಪಿಕೊಂಡ ಮೌಲಿಕ ವ್ಯವಸ್ಥೆ ಈ ಎಲ್ಲಾ ಅಂಶಗಳನ್ನು ಒಳಗೊಂಡಿರುತ್ತದೆ. ಪರಂಪರೆ ಸರಳ ನೇರ ರೇಖೆಯಲ್ಲಿ ಸಂಕೀರ್ಣವಾದುದು ಎನ್ನುತ್ತಾರೆ. ಹಿಂದೂ ಧರ್ಮ ಗ್ರಂಥಗಳಲ್ಲಿ ಪುರಾಣ ಹಾಗೂ ಜಾನಪದ ಹಾಡುಗಳಲ್ಲಿ ವರ್ಣಿಸಿರುವಂತೆ ಮಹಿಳೆಯರ ಸ್ಥಾನಮಾನ ಹೇಗಿದ್ದರೂ ಪುರುಷರಿಗೆ ಅಧೀನವಾಗಿಯೇ ಇರುತ್ತದೆ. ಪ್ರಾಚೀನ ಸಮಾಜದಲ್ಲಿ ಸ್ತ್ರೀಯರ ಸ್ಥಾನಮಾನ ಚಿತ್ರಣದ ಆಧಾರದ ಮೇಲೆ ಸಮಕಾಲೀನ ಸಮಾಜದ ಮಹಿಳೆಯರ ಸ್ಥಾನಮಾನವನ್ನು ವಿಶ್ಲೇಷಿಸುವಾಗ ಅನೇಕ ತೊಡಕುಗಳು ಎದುರಾಗುತ್ತವೆ. ಮಹಿಳೆ, ಸ್ತ್ರೀ, ನಾರಿ, ಹೆಂಗಸು, ವನಿತೆ ಮುಂತಾದವುಗಳಿಂದ ಕರೆಸಿಕೊಳ್ಳುವ ಈ ವ್ಯಕ್ತಿಯ ಜೀವನದ ಅಧ್ಯಯನ ತುಂಬಾ ಕುತೂಹಲಕಾರಿಯಾಗಿದೆ. ಭೂಮಿಯಲ್ಲಿ ಮಾನವನ ಜನನ ಆದಂದಿನಿಂದ ಇಂದಿನವರೆಗೂ ಮಹಿಳೆಯ ಸ್ಥಾನವನ್ನು ಸ್ಪಷ್ಟವಾಗಿ ಪರಿಭಾವಿಸಿಲ್ಲ. ಇಷ್ಟೇ ಅಲ್ಲದೇ ಇಂದಿನ ಆಧುನಿಕತೆಯ ಸಂದರ್ಭದಲ್ಲಿ ಅಭಿವೃದ್ಧಿ ಎಂಬ ಲಗಾಮಿಗೆ ಅಪ್ಪಿಕೊಂಡು ಕೈಗಾರೀಕರಣ, ನಗರೀಕರಣ, ಜಾಗತೀಕರಣ ಪ್ರಭಾವದಿಂದಾಗಿ ಕಾಡುವಾಸಿಯಾದ ಬುಡಕಟ್ಟು ಜನರನ್ನು ಒಕ್ಕಲೆಬ್ಬಿಸಿ ಜೀವನಪರ್ಯಂತ ನಿರ್ಗತಿಕರನ್ನಾಗಿ ಮಾಡಿದೆ. ಇದರಿಂದ ಕಾಡನ್ನೇ ತಮ್ಮ ಜೀವಾಳವೆಂದು ನಂಬಿ ಬದುಕುತ್ತಿದ್ದ ಆದಿವಾಸಿ ಜನರ ಜೀವನ ಇತ್ತ ಸಂಪ್ರದಾಯವನ್ನು ಬಿಡದೆ ಅತ್ತ ಸ್ಥೈರ್ಯದಿಂದ ತಮ್ಮ ಸಾಹಸ ಮಾಡುತ್ತಿದ್ದಾರೆ. ಇಂತಹವರಲ್ಲಿ ಕಾಡುಗೊಲ್ಲ ಬುಡಕಟ್ಟು ಸಮುದಾಯ ಒಂದು ಎಂದು ಹೇಳಬೇಕಾಗಿಲ್ಲ.

ಇಂದು ಕಾಡುಗೊಲ್ಲ ಸಮುದಾಯದ ಮಹಿಳೆಯ ಜೀವನದ ಎಲ್ಲಾ ಹಂತಗಳಲ್ಲಿಯೂ ಬದಲಾವಣೆಯನ್ನು ಕಾಣಬಹುದು. ಉಡುಗೆ-ತೊಡುಗೆಗಳಲ್ಲಿ ಹಿಂದೆ ಕೇವಲ ಹದಿನಾರು ಮೊಳದುದ್ದದ ಒಂದು ದಡಿ ಸೀರೆಯನ್ನುಟ್ಟು ಹಳೆಯ ಸಂಪ್ರದಾಯದ ಪದ್ಧತಿಯಲ್ಲಿರುತ್ತಿದ್ದ ಮಹಿಳೆಯು ಇವತ್ತಿನ ನಾಗರೀಕರಣದ ಪ್ರಭಾವದಿಂದ ವಿವಿಧ ಬಗೆಯ ಬದಲಾವಣೆಗಳನ್ನು ಕಂಡಿದ್ದಾಳೆ. ವಿದ್ಯಾವಂತ ಮಹಿಳೆಯರು ಚೂಡಿದಾರ, ಪ್ಯಾಂಟ್, ಟೀಶರ್ಟ್, ನೈಟಿಗಳನ್ನು ಉಪಯೋಗಿಸುತ್ತಾರೆ. ಸಾಮಾನ್ಯ ಮಟ್ಟದ ಗ್ರಾಮೀಣ ಮಹಿಳೆಯರು ಇತರೆ ಸಮುದಾಯಗಳಂತೆ ನೈಲಾನ್, ಪಾಲಿಸ್ಟಾರ್, ವಿವಿಧ ಬಗೆಯ ರಂಗುರಂಗಿನ ಉಡುಪುಗಳನ್ನು ಧರಿಸುತ್ತಿದ್ದಾಳೆ. ಆಹಾರ ಪದ್ಧತಿಯಲ್ಲಿ ತುತ್ತು ಅನ್ನಕ್ಕಾಗಿ ಪರದಾಡುತ್ತಿದ್ದು ಚಟ್ನಿ, ಮುದ್ದೆಯನ್ನು ಸೇವಿಸುತ್ತಿದ್ದ ಕಾಡುಗೊಲ್ಲ ಮಹಿಳೆ ಇಂದು ರೆಡಿಮೇಡ್ ರೇಷನ್ ತರುತ್ತಾಳೆ. ಅದರಲ್ಲಿಯೇ ಶಾವಿಗೆ, ಹಪ್ಪಳ, ಇವೆಲ್ಲವುಗಳ ರುಚಿಯನ್ನು ಕಂಡಿದ್ದಾಳೆ. ಅಂದು ಅಡಿಗೆ ಮಾಡಲು ಉರುವಲುವಾಗಿ ಕಟ್ಟಿಗೆಯನ್ನು ತರುತ್ತಿದ್ದ ಮಹಿಳೆ ಇಂದು ಗ್ಯಾಸ್ ಒಲೆ ಮತ್ತು ಕುಕ್ಕರನ್ನು ಬಳಸುತ್ತಿದ್ದಾಳೆ. ಒಂದು ಕಾಲದಲ್ಲಿ ಆಹಾರವನ್ನು ತಯಾರಿಸಲು ಭತ್ತವನ್ನು ಕುಟ್ಟುವ, ಮುದ್ದೆಯನ್ನು ಮಾಡಲು ಬೀಸುವಕಲ್ಲಿನಿಂದ ಬೀಸಿ ಅಡುಗೆ ಮಾಡಿ ತಿನ್ನುತ್ತಿದ್ದ ಮಹಿಳೆ ಇಂದು ಗಿರಣಿ ಸಹಾಯದಿಂದ ತಮ್ಮ ಶ್ರಮವನ್ನು ಉಳಿತಾಯ ಮಾಡತ್ತಾಳೆ. ಬಿತ್ತುವ, ಕೊಯ್ಯುವ ಕೆಲಸಗಳು, ಹಗಲೆಲ್ಲ ಬೆವರು ಸುರಿಸಿ ಶ್ರಮ, ಸಮಯವನ್ನು ಕಳೆಯುತ್ತಿದ್ದ ಮಹಿಳೆಯು ಇಂದು ಆಧುನಿಕ ಯಂತ್ರೋಪಕರಣದ ಸಹಾಯದಿಂದ ಬಿಡುವನ್ನು ಕಾಣುತ್ತಿದ್ದಾಳೆ.

ಶಿಕ್ಷಣ ಪದ್ಧತಿಯಲ್ಲಿ ತುಂಬಾ ಹಿಂದುಳಿದ ಮಹಿಳೆ ಪ್ರಸ್ತುತ ಸಂದರ್ಭದಲ್ಲಿ ಶಿಕ್ಷಣವನ್ನು ಕಲಿಯುತ್ತಿದ್ದಾಳೆ. ಒಂದು ಕಾಲದಲ್ಲಿ ನಾಲ್ಕು ಗೋಡೆಗಳ ಮಧ್ಯೆ ಹೊರಜಗತ್ತನ್ನು ಕಾಣಲಾಗದೆ ತಮ್ಮದೇ ಆದ ಪ್ರತ್ಯೇಕ ಹಟ್ಟಿಯ ಹುಲ್ಲುಗುಡಿಸಲಿನ ಒಳಮನೆಯಲ್ಲಿ ಇರುತ್ತಿದ್ದಳು. ಆದರೆ ಇಂದು ತಮ್ಮ ಮಕ್ಕಳಿಗೆ ಚೆನ್ನಾಗಿ ಶಿಕ್ಷಣ ಕಲಿಸುತ್ತಾರೆ. ಗ್ರಾಮೀಣ ಮಟ್ಟದಲ್ಲಿ ಮಹಿಳೆಯರು ಸಾಧಾರಣ ಮಟ್ಟದಲ್ಲಿ ಪ್ರಾಥಮಿಕ, ಪ್ರೌಢಶಿಕ್ಷಣ ಪಡೆದರೆ, ನಗರಗಳಲ್ಲಿ ವಾಸಿಸುವ ಮಹಿಳೆಯರು ಉನ್ನತ ಮಟ್ಟದಲ್ಲಿ ಶಿಕ್ಷಣ ಪಡೆಯುತ್ತಾರೆ. ಆಧುನಿಕ ಕಂಪ್ಯೂಟರ್ ತಂತ್ರಜ್ಞಾನಗಳ ಸಹಾಯದಿಂದ ದೈನಂದಿನ ಹೋರಾಟದಲ್ಲಿ ನೆರವು ಪಡೆಯುತ್ತಿದ್ದಾಳೆ. ಇಂದಿನ ಸಮಾಜವು ಅವುಗಳನ್ನೆಲ್ಲಾ ಕೃತಜ್ಞತೆಯಿಂದ ಕಾಣಬೇಕು. ಇದಕ್ಕಿಂತ ದೊಡ್ಡ ಕಾರಣವೇ ಬೇಕಿಲ್ಲ.

ಆರ್ಥಿಕತೆಯಲ್ಲಿ ಸ್ವಯಂ ಸೇವಾ ಸಂಸ್ಥೆಗಳಿಂದ ಸ್ಥಾಪಿಸಲ್ಪಟ್ಟ ಸ್ವ-ಸಹಾಯ ಗುಂಪು ಹಾಗೂ ಸ್ತ್ರೀ ಶಕ್ತಿ ಗುಂಪುಗಳು ತಾಲ್ಲೂಕು ಕೃಷಿ ಇಲಾಖೆಯಿಂದ ಬೆಳೆದು ಬಂದು ಗುಂಪುಗಳು, ಹೀಗೆ ಹಲವು ಬಗೆಯ ಗುಂಪುಗಳ ಸಹಾಯದಿಂದ ತಮ್ಮ ಆರ್ಥಿಕ ಮಟ್ಟವನ್ನು ಸುಧಾರಿಸಿಕೊಳ್ಳುತ್ತಿದ್ದಾರೆ. ಹಾಗೂ ಸ್ತ್ರೀಯರ ಸ್ಥಾನಮಾನವನ್ನು ಉತ್ತಮಪಡಿಸಿಕೊಳ್ಳಲು ಸಹಾಯವಾಗುತ್ತವೆ. ಈ ಗುಂಪುಗಳಲ್ಲಿ ತಮ್ಮ ಗ್ರಾಮದ ಅಥವಾ ಸಮುದಾಯದ ಸರ್ವಾಂಗೀಣ ಅಭಿವೃದ್ಧಿಗೆ ಪೂರಕವಾಗಿ ನಿಯಮಗಳನ್ನು ಕ್ರೋಢೀಕರಿಸಿಕೊಂಡು ತಮ್ಮತಮ್ಮಲ್ಲಿಯೇ ಸ್ವ-ಸಹಾಯ ಕಲ್ಪಿಸಿಕೊಳ್ಳಲು ಚಹರೆಯನ್ನು ಗುರುತಿಸಿಕೊಳ್ಳಲು ಗುಂಪುಗಳನ್ನು ಕಟ್ಟಿಕೊಂಡಿದ್ದಾರೆ. ಪರಸ್ಪರ ವಿಶ್ವಾಸ, ಸಮಾನ ಆಸಕ್ತಿ ಸ್ವಯಂ ಜಾಗೃತಿಯಿಂದ ಕೂಡಿದ ಹತ್ತರಿಂದ ಇಪ್ಪತ್ತು ಮಹಿಳೆಯರು ತಮ್ಮದೇ ಆದ ನೀತಿನಿಯಮಗಳಿಗೆ ಒಳಪಟ್ಟಿರುತ್ತಾರೆ. ವರ್ಷದಲ್ಲಿ ಆರು ತಿಂಗಳಿಗೊಂದು ಸಲ ಗುಂಪೊಂದನ್ನು ಬದಲಾಯಿಸಿಕೊಳ್ಳುತ್ತಾರೆ. ನಿಗದಿತವಾಗಿ ಉಳಿತಾಯ ಮಾಡುವುದು, ತಮ್ಮದೇ ಆದ ಸ್ವಂತ ತತ್ವಗಳ ಮೂಲಕ ಸಾಲನೀಡುವುದು, ಸಾಮಾನ್ಯ ನಿಧಿಯನ್ನು ರೂಡಿಸುವುದು ಒಮ್ಮತ ತೀರ್ಮಾನದಿಂದಲೇ ಎಲ್ಲಾ ಸಮಸ್ಯೆಗಳನ್ನು ತಮ್ಮಲ್ಲಿಯೇ ಬಗೆಹರಿಸಿಕೊಂಡು ಆರ್ಥಿಕ ಮಟ್ಟವನ್ನು ಸುಧಾರಿಸಿಕೊಳ್ಳುತ್ತಿದ್ದರು. ಇದರಿಂದ ಆರ್ಥಿಕ ಸುಧಾರಣೆಗಳು ಜೊತೆಗೆ ತಮ್ಮಲ್ಲಿ ಧೈರ್ಯವನ್ನು ತಂದುಕೊಳ್ಳುತ್ತಾ ಬ್ಯಾಂಕುಗಳ ಮುಖಾಂತರ ವ್ಯವಹಾರ ಮಾಡುವುದು ಸಾರ್ವಜನಿಕರ ಎದುರಿನಲ್ಲಿ ನಿಂತು ಮಾತನಾಡುವ ಚಾತುರ್ಯವನ್ನು ಬೆಳೆಸಿಕೊಳ್ಳುತ್ತಾರೆ. ಸರಕಾರದಿಂದ ಬರುವ ಸೌಲಭ್ಯಗಳನ್ನು ಕೇಳಿ ಪಡೆಯುತ್ತಾರೆ.

ಸಾಂಸ್ಕೃತಿಕವಾಗ ಈ ಕಾಡುಗೊಲ್ಲ ಮಹಿಳೆ ತಮ್ಮ ಸಮುದಾಯದ ಸಂಪ್ರದಾಯ ಆಚರಣೆಗಳು, ನಂಬಿಕೆಗಳು, ಕಟಿಬದ್ಧರೂಢಿಗಳು, ಆಚಾರ-ವಿಚಾರಗಳು, ವೇಷಭೂಷಣಗಳು, ಆಹಾರ ಮೊದಲಾದುವುಗಳ ವಿರುದ್ಧ ಅವಳು ಶೀತಲ ಸಮರವನ್ನು ಸಾರುತ್ತಾ ಅವೆಲ್ಲವನ್ನೂ ಕಡೆಗಣಿಸಿ ಇಂದಿನ ವಿದ್ಯಾವಂತ ಕಾಡುಗೊಲ್ಲ ಮಹಿಳೆ ಮುಂದುವರೆದಿದ್ದಾಳೆ.

ರಾಜಕೀಯ ವಲಯದಲ್ಲಿ ಮಹಿಳೆಯು ಶೇಕಡ ೩೩ ರಷ್ಟು ಮೀಸಲಾತಿ ಇರುವುದರಿಂದ ತಾವೂ ಸಹ ಭಾಗವಹಿಸಬಲ್ಲೆವು ಎನ್ನುವ ಮಟ್ಟದಲ್ಲಿ ಬೆಳೆಯುತ್ತಿದ್ದಾರೆ. ಚುನಾವಣೆಯ ಸಂದರ್ಭದಲ್ಲಿ ಮಹಿಳೆಯರಿಗೆ ಪ್ರತ್ಯೇಕವಾದಂತಹ ಅವಕಾಶಗಳು ಇರುವುದರಿಂದ ಚುನಾವಣೆಗಳಲ್ಲಿ ಸ್ಪರ್ಧಿಸಿ ಪ್ರಚಾರಕ್ಕೆಗೊಂಡು ಗ್ರಾಮ ಮಟ್ಟದಲ್ಲಿ, ತಾಲ್ಲೂಕು ಮಟ್ಟದಲ್ಲಿ ಹಾಗೂ ಜಿಲ್ಲಾ ಮಟ್ಟದಲ್ಲಿ ಚುನಾವಣೆಗೆ ಆಯ್ಕೆಯಾಗುತ್ತಾಳೆ. ಅಧಿಕಾರದ ಅನುಭವದ ಕೊರತೆ ಇರುವುದರಿಂದ ಪುರುಷರಿಂದ ಮಾಹಿತಿಯನ್ನು ಪಡೆಯುತ್ತಾಳೆ. ಅಕ್ಷರ ಕಲಿತ ಮಹಿಳೆ ಅಧಿಕಾರ ಚಲಾಯಿಸುತ್ತಿದ್ದರೆ, ಅಕ್ಷರ ವಂಚಿತ ಮಹಿಳೆಯು ಅನಿವಾರ್ಯವಾಗಿ ಗಂಡಸಿನ ಆಸರೆಯನ್ನು ಪಡೆಯಲೇಬೇಕಾಗುತ್ತದೆ. ಹೆಸರಿಗೆ ಮಾತ್ರ ಹೆಣ್ಣು ಆದರೆ ಅಧಿಕಾರ ನಡೆಸುವವನು ಗಂಡಸು. ಇಂದು ಸಮೂಹ ಮಾಧ್ಯಮಗಳಾದ ಟಿ.ವಿ., ರೇಡಿಯೋ ಮುಂತಾದವುಗಳಲ್ಲಿ ಸಹ ಅವಕಾಶವನ್ನು ಪಡೆದುಕೊಂಡು ನಾನು ಪುರುಷನಿಗಿಂತ ಕಡಿಮೆಯಲ್ಲ ಎಂದು ತೋರಿಸುತ್ತಾಳೆ. [ಪತ್ರಿಕೆಗಳಲ್ಲಿ ಲೇಖನಗಳು, ಕಥೆ, ಕಾವ್ಯ ಬರೆಯುವ ಹವ್ಯಾವಸವನ್ನು ರೂಢಿಸಿಕೊಂಡಿದ್ದಾಳೆ.]

ಹಿಂದೆ ಕಾಡುಗೊಲ್ಲಮಹಿಳೆಯರು ಎಂದರೆ ಯಾರು? ಅವರು ಎಲ್ಲಿಂದ ಬಂದವರು? ಅವರ ಕಸುಬು ಏನು? ಮೊದಲಾಗಿ ಸಮಾಜಕ್ಕೆ ಗೊತ್ತಿಲ್ಲದಿದ್ದವಳು ಇಂದು ಪ್ರತಿಯೊಂದರಲ್ಲಿಯೂ ತನ್ನ ಚಹರೆಯನ್ನು ತೋರಿಸಿದ್ದಾಳೆ. ಹೀಗೆ ಹಂತ ಹಂತವಾಗಿ ಬೆಳೆದು ಬಂದಿರುವ ಕಾಡುಗೊಲ್ಲ ಸಮುದಾಯದ ಮಹಿಳೆಯು ತಮ್ಮ ಸ್ಥಿತಿಗತಿಗಳನ್ನು ಸಾಮಾನ್ಯವಾಗಿ ಸುಧಾರಣೆ ಮಟ್ಟದಲ್ಲಿ ಸ್ಥಾಪಿಸಿಕೊಂಡಿರುತ್ತಾರೆ.

**೪.೧ ಸಾಮಾಜಿಕ ನೆಲೆ**

ಮಾನವನ ಸಮಾಜವು ಸಾಮಾಜಿಕ ಸಂಬಂಧಗಳ ಸರಪಳಿಯಿದ್ದ ಹಾಗೆ. ಅದು ವ್ಯಕ್ತಿಗಳ ನಡುವೆ ಪರಸ್ಪರ ಸಂಬಂಧವನ್ನು ಏರ್ಪಡಿಸುವ ಪ್ರಕ್ರಿಯೆಯಾಗಿದೆ. ಇದೊಂದು ಸಮಾಜದ ಘಟಕಗಳಾದ ಅಥವಾ ಬೇರುಗಳಾದ ಸಾಮಾಜಿಕ ಸಂಬಂಧಗಳ ಕ್ರಮಬದ್ಧ ವ್ಯವಸ್ಥೆಯಾಗಿದೆ. ಕಾಡುಗೊಲ್ಲ ಬುಡಕಟ್ಟು ಸಮುದಾಯದ ಜೀವನ ವಿಧಾನ, ಮತ್ತು ಸಾಮಾಜಿಕ ವ್ಯವಸ್ಥೆಯ ಲೋಕರೂಢಿಗಳು, ಸಂಪ್ರದಾಯಗಳು, ಪರಸ್ಪರ ಸಹಕಾರ, ವಿವಿಧ ನಿಯಮಗಳು, ವರ್ಗಗಳು, ಉಡಿಗೆ, ತೊಡಿಗೆ, ಆಹಾರ, ವಸತಿ, ವೃತ್ತಿ, ಬೆಡಗುಗಳು, ವಿವಾಹ, ಕುಟುಂಬ, ನ್ಯಾಯಪದ್ಧತಿ, ಹಾಗೂ ಸಾಮಾಜಿಕ ನಿಯಂತ್ರಣವನ್ನೊಳಗೊಂಡ ಕ್ರಮಬದ್ಧವಾದ ವ್ಯವಸ್ಥೆಯಾಗಿದೆ.

ಸಾಮಾಜಿಕ ವ್ಯವಸ್ಥೆಯು ಪರಿಸರ, ಕಾಲ, ಸ್ಥಳಗಳನ್ನಾಧರಿಸಿರುವುದರಿಂದ ಅದು ಕಾಲದಿಂದ ಕಾಲಕ್ಕೆ, ಸಮೂಹದಿಂದ ಸಮೂಹಕ್ಕೆ ಭಿನ್ನವಾಗಿರುತ್ತದೆ. ಸಮಾಜದಲ್ಲಿನ ಸದಸ್ಯರುಗಳ ಅಂತರ ಸಂಬಂಧಗಳ ಮತ್ತು ಅಂತರಕ್ರಿಯೆಗಳ ಸ್ವರೂಪ ಹಾಗೂ ವ್ಯಾಪ್ತಿಗಳ ಪ್ರಚಲಿತ ಸಂಸ್ಕೃತಿಯಿಂದ ನಿರ್ಧರಿಸಲ್ಪಡುತ್ತವೆ. ಮಾನವನ ಸಾಮಾಜಿಕ ಜೀವನದಲ್ಲಿ ಸಾಮಾಜೀಕರಣ ಮತ್ತು ಸಾಮಾಜಿಕ ನಿಯಂತ್ರಣ, ಸಾಮಾಜಿಕ ವ್ಯವಸ್ಥೆಗೆ ಸಹಾಯಕವಾಗಿರುವ ಪ್ರಮುಖ ಅಂಶಗಳು.

ಪ್ರಸ್ತುತ ಕಾಡುಗೊಲ್ಲರ ಮಹಿಳೆಯ ಜೀವನ ವಿಧಾನ ಮತ್ತು ಸಾಮಾಜಿಕ ನೆಲೆಯಲ್ಲಿ ಅವಳ ವೇಷ ಭೂಷಣ, ಆಹಾರ, ವಸತಿ, ವೃತ್ತಿ, ಬೆಡಗು, ರಕ್ತಸಂಬಂಧಗಳು, ಕುಟುಂಬ, ನ್ಯಾಯ ಪದ್ಧತಿ ಮತ್ತು ವಿಧಿನಿಷೇಧಗಳನ್ನು ಪ್ರಮುಖವಾಗಿ ಸಾಮಾಜಿಕ ನೆಲೆಯಲ್ಲಿ ಅಧ್ಯಯನ ಮಾಡಲಾಗಿದೆ. ನೂರಾರು ಬೆಡಗುಗಳನ್ನು ಹೊಂದಿದ, ರಕ್ತ ಸಂಬಂಧಕ್ಕೆ ಮಹತ್ವಕೊಟ್ಟು, ಹತ್ತಿರದ ರಕ್ತಸಂಬಂಧದಲ್ಲಿ ವಿವಾಹ ಮಾಡಿಕೊಳ್ಳುವ, ಗುಡಿಸಲು ಗುಬ್ಬಗಳಲ್ಲಿ ವಾಸಿಸುವ, ಪಶುಪಾಲಕರಾಗಿ ಹಾಲು ತುಪ್ಪದಲ್ಲಿ ಸಮೃದ್ಧಿ ಊಟಮಾಡುವ, ಗುಡಿಕಟ್ಟೆ ಮತ್ತು ಕಟ್ಟೆಮನೆಗಳಲ್ಲಿ ನ್ಯಾಯ ತೀರ್ಮಾನ ಮಾಡಿಕೊಳ್ಳುವ, ಬಡತನದ ಬೇಗೆಯಲ್ಲಿ ಬಳಲುತ್ತಿರುವ ಪ್ರಾಚೀನ ಕಾಲದ ಬುಡಕಟ್ಟು ಸಂಸ್ಕೃತಿಯನ್ನು ಉಳಿಸಿಕೊಂಡಿರುವ ವಿಜ್ಞಾನ, ತಂತ್ರಜ್ಞಾನ, ಶಿಕ್ಷಣ ಮತ್ತು ನಗರೀಕರಣಕ್ಕೆ ಒಳಗಾಗದಂಥ ಸಾಮಾಜಿಕ ವ್ಯವಸ್ಥೆ ಮತ್ತು ಜೀವನವಿಧಾನ ಈ ಕಾಡುಗೊಲ್ಲರಲ್ಲಿ ಕಂಡುಬರುತ್ತದೆ. ಆದ್ದರಿಂದ ಮೊಳಕಾಲ್ಮೂರು ಪ್ರದೇಶದಲ್ಲಿ ಗೊಲ್ಲರ ಹಟ್ಟಿಗಳಲ್ಲಿ ವಾಸಿಸುವ ಕಾಡುಗೊಲ್ಲರ ಮಹಿಳೆಯ ಜೀವನ ವಿಧಾನ ಮತ್ತು ಮಹಿಳೆಯ ಸಾಮಾಜಿಕ ನೆಲೆಯನ್ನು ಈ ಅಧ್ಯಾಯದಲ್ಲಿ ವಿವರವಾಗಿ ಚರ್ಚಿಸಲಾಗಿದೆ.

**ವೇಷಭೂಷಣ**

ಒಂದು ಸಮುದಾಯದ ವೇಷ-ಭೂಷಣ ಆ ಜನಾಂಗದ ಸಂಸ್ಕೃತಿಯನ್ನು ತಿಳಿಸುತ್ತದೆ. ಕಾಡುಗೊಲ್ಲರು ಕಾಡಿನಿಂದ ನಾಡಿಗೆ ಬಂದು ಪ್ರತ್ಯೇಕವಾದ ಹಟ್ಟಿಗಳನ್ನು ಕಟ್ಟಿಕೊಂಡು ಜೀವಿಸುತ್ತಿದ್ದರೂ ಬುಡಕಟ್ಟು ಜನಾಂಗದ ಗುಣಲಕ್ಷಣಗಳನ್ನು ಈ ಕಾಡುಗೊಲ್ಲ ಮಹಿಳೆಯರು ಮೈಗೂಡಿಸಿಕೊಂಡಿದ್ದಾರೆ. ಕಷ್ಟಸಹಿಷ್ಣುಗಳೂ, ಮುಗ್ಧರೂ, ಪ್ರಾಮಾಣಿಕರೂ, ಧಾರ್ಮಿಕ ಶ್ರದ್ಧೆಯುಳ್ಳವರೂ ಆದ ಇವರ ಉಡುಪು ಮತ್ತು ಆಭರಣಗಳಲ್ಲಿ ವೈವಿಧ್ಯತೆಯಿದೆ. ಆಗಿನ ಕಾಲದ ಈ ಸಮುದಾಯದವರು ಪ್ರತಿನಿತ್ಯ ಸ್ನಾನಮಾಡದೆ ಬದುಕಿನ ಜಂಜಾಟದಲ್ಲಿ ಪಶುಪಾಲನೆ, ಬೇಟೆ ಮತ್ತು ಕೃಷಿಕಾರ್ಯಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದರಿಂದ ಹಬ್ಬ ಮತ್ತು ಜಾತ್ರೆಗಳಲ್ಲಿ ಸ್ನಾನಮಾಡಿ ಬಟ್ಟೆ ಬದಲಾಯಿಸುವ ರೂಡಿಯನ್ನಿಟ್ಟುಕೊಂಡಿದ್ದರು. ಆದರೆ ಇಂದು ಪರಿಸ್ಥಿತಿ ಬದಲಾಗಿದೆ. ವಾರಕ್ಕೊಮ್ಮೆಯಾದರೂ ಸ್ನಾನಮಾಡಿ ಬಟ್ಟೆ ಬದಲಾಯಿಸುವ ಪರಿಪಾಠ ಇಟ್ಟುಕೊಂಡಿರುವುದನ್ನು ನಾವು ಮೊಳಕಾಲ್ಮೂರು ತಾಲ್ಲೂಕಿನ ಪ್ರದೇಶದ ಮಹಿಳೆಯರಲ್ಲಿ ಕಾಣಬಹುದಾಗಿದೆ. ಇವರು ಇತ್ತೀಚಿಗೆ ತುಪ್ಪವನ್ನು ತಲೆಗೆ ಹಚ್ಚಿಕೊಳ್ಳದೆ ಕೊಬ್ಬರಿ ಎಣ್ಣೆಯನ್ನು ಹಚ್ಚಿಕೊಂಡು ತುರುಬು ಕಟ್ಟುತ್ತಿದ್ದಾರೆ. ಇವರು ಅತ್ಯಂತ ಸರಳ ಉಡುಪು ಮತ್ತು ಆಭರಣಗಳನ್ನು ಧರಿಸುತ್ತಾರೆ.

**ಉಡುಪುಗಳು**

ಸಂಪ್ರದಾಯಸ್ಥ ಕಾಡುಗೊಲ್ಲ ಮಹಿಳೆಯರು ಹದಿನಾರು ಮೊಳ ಉದ್ದದ ದಡಿಸೀರೆ ಮತ್ತು ಇಳಕಲ್ ಸೀರೆ ಉಡುತ್ತಾರೆ. ಹಳೆಯಕಾಲದ ಮುದುಕಿಯರು ಇಂದಿಗೂ ಕಾಟನ್ ಸೀರೆಗಳನ್ನು ಉಟ್ಟು, ರವಿಕೆರಹಿತವಾಗಿರುವುದನ್ನು ನಾವು ಕಾಣಬಹುದು. ಆದರೆ ಇಂದಿನ ಆಧುನಿಕ ಕಾಡುಗೊಲ್ಲ ಮಹಿಳೆಯರು ರವಿಕೆ ಸಹಿತ, ಪಾಲಿಸ್ಟಾರ್, ನೈಲಾನ್ ಸೀರೆ, ಉಡುಪುಗಳನ್ನು ಧರಿಸುವರು. ಸಾಮಾನ್ಯವಾಗಿ ಚಪ್ಪಲಿ ತೊಡುವುದು ಕಡಿಮೆ. ಕುರಿ, ಮೇಕೆ, ದನಗಳ ಹಿಂದೆ ತಿರುಗುವ ಮಹಿಳೆಯರು ಗಂಡಸರಂತೆ ಚಪ್ಪಲಿ ಹಾಕಿಕೊಳ್ಳುತ್ತಾರೆ. ಅಡಿಕೆ ಚೀಲವನ್ನು ಕಟ್ಟಿಕೊಂಡು ಎಲೆ, ಅಡಿಕೆ, ಸುಣ್ಣಗಾಯಿ ಡಬ್ಬಿಯನ್ನು ಇಟ್ಟುಕೊಂಡಿರುತ್ತಾರೆ.

ಈ ಸಮುದಾಯದ ಸಂಪ್ರದಾಯಸ್ಥ ಹೆಂಗಸರು ರವಿಕೆಯನ್ನು ತೊಡುವುದಿಲ್ಲ. ಕೆಂಪು ಅಂಚಿನ ಬಿಳಿಸೀರೆಯನ್ನು ತೊಡುವ ವಾಡಿಕೆಯಿತ್ತು. ಅದು ಹದಿನಾರು ಮೊಳ ಉದ್ದದ ದಡಿಸೀರೆ ಮತ್ತು ಇಲಕಲ್ ಸೀರೆಯ ಕಾಟನ್ ಬಟ್ಟೆಗಳನ್ನೇ ಹೆಚ್ಚಾಗಿ ಬಳಸುತ್ತಿದ್ದರು. ಇಂದಿಗೂ ಸಹ ಮೊಳಕಲ್ಮೂರು ತಾಲ್ಲೂಕಿನ ಹೊಸಹಳ್ಳಿ ಗೊಲ್ಲರ ಹಟ್ಟಿ ಮತ್ತು ಚಿಕ್ಕೇರ ಹಳ್ಳಿ ಗೊಲ್ಲರ ಹಟ್ಟಿಯ ಹೆಂಗಸರು ಈ ತೆರನಾದ ಉಡುಪುಗಳನ್ನು ಧರಿಸುವುದನ್ನು ನಾವು ಇಂದಿಗೂ ಸಹ ಕಾಣಬಹುದಾಗಿದೆ. ಆದರೆ ಇತ್ತೀಚಿನ ಮಹಿಳೆಯರು ರವಿಕೆ ಸಹಿತ ಪಾಲಿಸ್ಟಾರ್, ನೈಲಾನ್ ಸೀರೆಗಳನ್ನು ಉಡುವುದನ್ನು ಮೊಳಕಾಲ್ಮೂರು ತಾಲ್ಲೂಕಿನ ಪಿ.ಟಿ.ಹಟ್ಟಿಯಲ್ಲಿ ಕಾಣಬಹುದು. ಆದರೆ ಕೆಂಪು ಅಂಚಿನ ಬಿಳಿಸೀರೆಯನ್ನು ಉಡುವುದಿಲ್ಲ. ಕೆಂಪು, ಹಸಿರು, ನೀಲಿ, ನೇರಳೆ ಬಣ್ಣ ಮೊದಲಾದ ಬಣ್ಣ ಬಣ್ಣದ ಸೀರೆಗಳನ್ನು ಈಗಿನ ಪೀಳಿಗೆಯ ಯುವತಿಯರು ತೊಡುತ್ತಿದ್ದಾರೆ. ಎಲ್ಲಾ ಜನಾಂಗದವರಂತೆ ಸಾಮಾನ್ಯ ಉಡುಗೆಯನ್ನು ತೊಡುತ್ತಿದ್ದಾರೆ. ಆಧುನೀಕರಣ, ಔಪಚಾರಿಕ ಶಿಕ್ಷಣ, ನಗರೀಕರಣ ಮತ್ತು ಸಾರಿಗೆ ಸಂಪರ್ಕಗಳಿಂದಾಗಿ ಈ ಸಮುದಾಯದ ಯುವತಿಯರು ಅನುಕರಣೆಯಿಂದಾಗಿ ಆಧುನಿಕ ಮತ್ತು ಪಾಶ್ಚಾತ್ಯ ಉಡುಗೆಗಳನ್ನು ತೊಡಲು ಪ್ರಾರಂಭಿಸಿದ್ದಾರೆ. ಇಂತಹವರ ಸಂಖ್ಯೆ ಕೇವಲ ಬೆರಳೆಣಿಕೆಯಷ್ಟು ಮಾತ್ರ. ಆದರೆ ಇಂದಿಗೂ ಈ ಪ್ರದೇಶದ ಬಹುತೇಕ ಗೊಲ್ಲ ಸಮುದಾಯದವರು ತಮ್ಮ ಸಂಪ್ರದಾಯದ ಉಡುಪನ್ನೇ ತೊಡುತ್ತಾರೆ. ಇವರು ತಮ್ಮ ಸಾಂಪ್ರದಾಯಿಕ ಕಸುಬಾದ ಪಶುಪಾಲನೆ ಮತ್ತು ಕುರಿಸಾಕಾಣಿಕೆ ಸಮಯದಲ್ಲಿ ಹಾಗೂ ಕೃಷಿ ಕಾರ್ಯಗಳಲ್ಲಿ ತಮ್ಮ ವೃತ್ತಿಗೆ ಹೆಚ್ಚಿಗೆ ಒತ್ತು ನೀಡುತ್ತಿರುವುದರಿಂದ ಉಡುಗೆಗೆ ಹೆಚ್ಚು ಗಮನ ಕೊಡುವುದಿಲ್ಲ.

**ತೊಡಿಗೆ (ಭೂಷಣ)**

ಕಾಡುಗೊಲ್ಲರ ಗಂಡಸರು ಆಭರಣ ಪ್ರಿಯರಲ್ಲ. ಅತ್ಯಂತ ಸರಳ ಜೀವಿಗಳು. ಆದರೂ ಕೂಡ ಮುಂಗೈಗೆ ಬದ್ದು ಹತ್ತೆ ಕಡಗ, ಮುರಪಾಟಲಾಕ, ಬಟ್ಟಿನ ಸಲಿಗೆ, ಉಂಗುರ, ಹಸುಬೆ ಚೀಲ, ಮೇಣಗಪ್ಪದ ಅಡಿಕೆ ಎಲೆ

ಚೀಲ ಧರಿಸುತ್ತಾರೆ. ಮದುವೆಗೆ ಮೊದಲು ಬೆಳ್ಳಿಯ ಕಡಗವನ್ನು ಹಾಕಿಕೊಳ್ಳುವ ಗೊಲ್ಲರ ಹೆಂಗಸರು ಮದುವೆಯಾಗಿ ವರ್ಷ ತುಂಬುವುದರೊಳಗೆ ಅಂದರೆ ಮೂರು ತಿಂಗಳೊಳಗೆ ಇಲ್ಲವೇ ಒಂದು ಮಗುವಿನ ತಾಯಿಯಾಗುವುದರೊಳಗೆ ಬಲಗೈಗೆ 'ಗೊಲ್ಲಕಡಗ'ವನ್ನು ಧರಿಸುತ್ತಾರೆ. ಇದನ್ನು ಕೃಷ್ಣಕಡಗ ಎಂದೂ ಸಹ ಕರೆಯುತ್ತಾರೆ. ಇದು ಸಾಂಕೇತಿಕವಾಗಿ ಇವರ ಸಂಸ್ಕೃತಿಯ ಮತ್ತು ಸಂಪ್ರದಾಯದ ಪ್ರತೀಕವಾಗಿದೆ. ಈ ಗೊಲ್ಲ ಕಡಗದ ಮೂಲಕವೇ ಇವರು ಕಾಡುಗೊಲ್ಲ ಜನಾಂಗದ ಮಹಿಳೆಯರು ಎಂದು ಸುಲಭವಾಗಿ ಗುರುತಿಸಬಹುದು. ಇಂದಿಗೂ ಈ ಜನಾಂಗದ ಹಿರಿಯ ಮಹಿಳೆಯರು (ಮುದುಕಿಯರು) ಗೊಲ್ಲಕಡಗವನ್ನು ಧರಿಸುವುದನ್ನು ಈ ಪ್ರದೇಶದ ಗ್ರಾಮೀಣ ಭಾಗದಲ್ಲಿ ಕಾಣಬಹುದು. ಇದರ ಜೊತೆಗೆ ಕಿವಿಗೆ ಓಲೆಯನ್ನು ತೊಡುವ ಪದ್ಧತಿಯನ್ನು ಬೆಳಸಿಕೊಂಡಿದ್ದಾರೆ. ಮೂಗಿಗೆ ಮೂಗುತಿ, ಕಾಲಿನ ಬೆರಳುಗಳಿಗೆ ಬೆಳ್ಳಿಯ ಕಾಲುಂಗರ ಮತ್ತು ಕಾಲಿಗೆ ಬೆಳ್ಳಿಯ ಕಾಲಂದಿಗೆ (ಗೆಜ್ಜೆಪಟ್ಟಿ) ತೊಡುತ್ತಾರೆ. ಈ ಸಮುದಾಯದ ಹಿರಿಯ ಗೊಲ್ಲ ಮಹಿಳೆಯರು ಸೊಂಟಕ್ಕೆ ಬೆಳ್ಳಿಯ 'ಡಾಬನ್ನು' ತೊಡುವ ಪದ್ಧತಿಯಿದೆ.

ಇತ್ತೀಚಿನ ದಿನಗಳಲ್ಲಿ ನೆರೆಹೊರೆಯ ಸಮುದಾಯದವರ ಪ್ರಭಾವದಿಂದಾಗಿ ಮತ್ತು ನಾಗರೀಕತೆಯಿಂದಾಗಿ ಸಾಮಾನ್ಯವಾದ ಆಭರಣಗಳನ್ನು ಇತರೆ ಜನರಂತೆಯೇ ತೊಡುವ ಪದ್ಧತಿಯನ್ನು ಮೈಗೂಡಿಸಿಕೊಂಡಿದ್ದಾರೆ. ಇಂತಹ ಸನ್ನಿವೇಶವನ್ನು ನಾವು ಮದುವೆಯ ಸಂದರ್ಭದಗಳಲ್ಲಿ ವೀಕ್ಷಿಸಬಹುದಾಗಿದೆ. ವಿವಾಹದ ಸಂದರ್ಭದಲ್ಲಿ ಕುಪ್ಪೆಕಡಗ, ಒಂಟಿಕಡಗ, ಕೀಲಕಡಗ, ರೆಟ್ಟೆಬಂದಿ, ಚಿಂತಾಕ, ಗುಂಡಿನ ಸರ, ಕಾಸಿನ ಸರ, ಜೋಡಿ ಗುಂಡಿನ ಅಡಿಕೆ, ಮುತ್ತಿನ ಬುಗುಡಿ, ಬುಲಾಕ, ಅರ್ಧಚಂದ್ರದ ನತ್ತು, ಬೆರಳಿಗೆ ಉಂಗುರ, ಹಸಿರುಗಾಜಿನ ಬಳೆಗಳು, ಕೊರಳಿಗೆ ಹವಳ, ಕರಿಮಣಿ ಸೇರಿಸಿದ ತಾಳಿಸರ, ಹಣೆಗೆ ಕುಂಕುಮ, ಮುಡಿಗೆ ಹೂವು ಮುಡಿಯುವುದು ಇವರು ಧರಿಸುವ ಆಭರಣಗಳೊಟ್ಟಿಗಿನ ಅಲಂಕಾರಿಕ ರೀತಿಯಾಗಿದೆ.

ಈ ಕಾಡುಗೊಲ್ಲ ಸಮುದಾಯದಲ್ಲಿ ಒಂದು ಅಪರೂಪವಾದ ಸಂಪ್ರದಾಯವೆಂದರೆ, ಇವರಲ್ಲಿ ಗಂಡ ಸತ್ತ ನಂತರವೂ ಮಹಿಳೆಯರು ತಾಳಿಯೂ ಸೇರಿದಂತೆ ಎಲ್ಲಾ ರೀತಿಯ ಆಭರಣಗಳನ್ನು ಧರಿಸಿ ಸುಮಂಗಲಿಯರಾಗಿ ಮುಂದುವರೆಯುವರು. ಇದು ಇತರೆ ಸಮುದಾಯದವರನ್ನು ಆಶ್ಚರ್ಯ ಚಕಿತರನ್ನಾಗಿಸುವಂತದ್ದಾಗಿದೆ. ಕಾರಣ ಶ್ರೀಕೃಷ್ಣನೇ ನಮ್ಮ ನಿಜವಾದ ಗಂಡ ಅವನಿಗೆ ಸಾವೇ ಇಲ್ಲ. ಆದ್ದರಿಂದ ನಾವು ಯಾವಾಗಲೂ ಮುತ್ತೈದೆಯಲಾಗಿರುತ್ತೇವೆ ಎಂಬುದು ಇವರ ಅಭಿಮತ ಮತ್ತು ಹಾಗಯೇ ಬಾಳುತ್ತಾರೆ. ಕಾಡುಗೊಲ್ಲರು ತಲೆಯ ಮೇಲಿನ ಪೇಟಕ್ಕೆ ಬಹಳ ಮಹತ್ವ ಕೊಡುತ್ತಾರೆ. ಹೆಂಗಸರೂ ಕೂಡ ತಲೆಯ ಮೇಲೆ ಸೆರಗು ಹಾಕಿಕೊಳ್ಳುವುದು ಗೌರವದ ಸಂಕೇತವಾಗಿದೆ. ಯಾವುದೇ ಧಾರ್ಮಿಕ ಕಾರ್ಯ ಅಥವಾ ಶುಭಕಾರ್ಯಗಳಲ್ಲಿ ಪೇಟಸುತ್ತುವುದು, ತಲೆಯ ಮೆಲೆ ಸೆರಗು ಹಾಕಿಕೊಳ್ಳುವ ಗರತಿ ಹೆಣ್ಣುಮಕ್ಕಳಿಗೆ ಬಹಳ ಗೌರವವಿದೆ.

**ಆಹಾರ ಪದ್ಧತಿ**

ಈ ಪ್ರದೇಶದಲ್ಲಿ ಹೆಚ್ಚಾಗಿ ಜೋಳ ಬೆಳೆಯುವುದರಿಂದ ರೊಟ್ಟಿ, ಮುದ್ದೆ ಇಲ್ಲದ ಆಹಾರವಿಲ್ಲ. ರೊಟ್ಟಿ, ಪಲ್ಯ ಮುಖ್ಯವಾದ ಆಹಾರವಾಗಿದೆ. ಗೊಲ್ಲರು ಮೂಲತಃ ಮಾಂಸಾಹಾರಿಗಳಾಗಿದ್ದು ಕೂಡ ಸಸ್ಯಹಾರಕ್ಕೆ ಅಷ್ಟೆ ಮಹತ್ವ ಕೊಡುತ್ತಾರೆ. ಪಶುಪಾಲಕರಾಗಿದ್ದಾಗಲೂ ಸಹ ಬಹು ಹಿಂದಯೇ ಸೀಮೆ ಅಕ್ಕಿ, ಬಿದಿರ ಅಕ್ಕಿ, ಕಾಡೆಮ್ಮೆಯ ಮಾಂಸ, ಹಾಲು, ಜೇನುತುಪ್ಪ, ಗೆಡ್ಡೆ ಗೆಣಸುಗಳನ್ನು ಆಹಾರವಾಗಿ ಬಳಸುತ್ತಿದ್ದರಂತೆ. ಸಜ್ಜೆ, ನವಣೆ, ಅಕ್ಕಿ, ಎಳ್ಳು, ತೊಗರಿ, ಅಲಸಂದಿ, ಹೆಸರು, ಉರುಳಿ, ಅವರೆ ಮೊದಲಾದ ಧಾನ್ಯಗಳನ್ನು, ಮೆಣಸಿನಕಾಯಿ, ಬದನೇಕಾಯಿ, ಹೀರೆಕಾಯಿ, ಬೆಂಡೆಕಾಯಿ, ಕುಂಬಳಕಾಯಿ, ಈರುಳ್ಳಿ ಮೊದಲಾದ ಆಹಾರ ತರಕಾರಿಗಳನ್ನು ಬಳಸುತ್ತಾರೆ. ಅಡವಿ ಸೊಪ್ಪುಗಳಾದ ಬೇಲಿ ಮೇಲಿನ ಆಲೆಸೊಪ್ಪು, ಹರಿವೆಸೊಪ್ಪು, ಗೊರಜಿಗಿನ ಸೊಪ್ಪು, ಕಿರುಕ್ಷಾಲಿ, ಹುಣಸೆಚಿಗರು, ನುಗ್ಗೆ ಸೊಪ್ಪು, ಹಾಲು, ಮೊಸರು, ಬೆಣ್ಣೆ, ತುಪ್ಪ, ಮಜ್ಜಿಗೆಯನ್ನು ಊಟದಲ್ಲಿ ಹೆಚ್ಚು ಉಪಯೋಗಿಸುತ್ತಾರೆ. ಮಾಂಸವನ್ನು ಸೇವಿಸುತ್ತಾರೆ. ಗೊಲ್ಲ ಸಮುದಾಯ ಆಹಾರ ಪದಾರ್ಥಗಳನ್ನು ಮತ್ತು ಹೊಲಕ್ಕೆ ಬಿತ್ತುವ ಬೀಜಗಳನ್ನು ಮಣ್ಣಿನ ಮಡಿಕೆ ಅಥವಾ ಸೋರೆಗಳಲ್ಲಿ ಸಂಗ್ರಹಿ ಇಡುವುದನ್ನು ಇಂದಿಗೂ ಈ ಪ್ರದೇಶಗಳಲ್ಲಿ ಕಾಣಬಹುದು. ಕೆಲವು ರೈತರು ಬಿತ್ತನೆ ಬೀಜಗಳಿಗೆ ಕೆಮ್ಮಣ್ಣು, ಬೂದಿ, ಹಸುವಿನ ಗಂಜಲ

ಸೇರಿಸಿ ಅವನ್ನು ಪರಿಷ್ಕರಿಸುತ್ತಾರೆ. ಇವನ್ನು ಸಂಗ್ರಹಿಸಲು ಹೆಚ್ಚಾಗಿ ಮಣ್ಣಿನ ಸೋರೆಗಳನ್ನು ಬಳಸುತ್ತಾರೆ. ಅಡುಗೆಗೆ ಕೂಡ ಮಣ್ಣಿನ ಮಡಿಕೆ, ಮುಚ್ಚಳ, ಗಡಿಗೆ ಮತ್ತು ಸೋರೆಗಳನ್ನು ಬಳಸುತ್ತಾರೆ. ಮಣ್ಣಿನ ಒಲೆಗಳನ್ನು ತಂದು ಕಟ್ಟಿಗೆಗಳಿಂದ ಬೆಂಕಿ ಹಚ್ಚಿ ಮಹಿಳೆಯರು ಆಹಾರ ಬೇಯಿಸುತ್ತಾರೆ.

**ವೃತ್ತಿಗಳು:**

ಪಶುಪಾಲನೆಯ ಮೂಲದ ಭಾರತದ ಅತ್ಯಂತ ಆದಿಮ ಬುಡಕಟ್ಟುಗಳಲ್ಲಿ ಒಂದಾದ ಕಾಡುಗೊಲ್ಲರ ಸಮುದಾಯ ತಮ್ಮದೇ ಆದ ಸಂಸ್ಕೃತಿಯನ್ನು ಮುಂದುವರೆಸಿಕೊಂಡು ಬರುತ್ತಿದೆ. ಮೂಲತಃ ಕಾಡುಮೇಡುಗಳಲ್ಲಿ ಅಲೆಮಾರಿಗಳಾಗಿ ಬೇಟೆಗಾರಿಕೆಯನ್ನು ಮೈಗೂಡಿಸಿಕೊಂಡಿದ್ದ ಈ ಸಮುದಾಯ ಬರುಬರುತ್ತಾ ಪಶುಗಳ ಪಾಲಕರಾಗಿ ಗೊಲ್ಲರೆನಿಸಿಕೊಂಡರು. ಮೊಳಕಾಲ್ಮೂರು ತಾಲ್ಲೂಕಿನ ಈ ಪ್ರದೇಶದ ಗೊಲ್ಲರು ಬಡತನ ರೇಖೆಗಿಂತ ಕೆಳಗೆ ಜೀವಿಸುವ ಇವರು ಪಶುಪಾಲನೆ ಮತ್ತು ವ್ಯವಸಾಯವನ್ನು ವೃತ್ತಿಗಳನ್ನಾಗಿಸಿಕೊಂಡು ಕ್ರಮೇಣ ಹಂತಹಂತವಾಗಿ ಮುಂದುವರೆಯುತ್ತಾ ಬಂದಿದ್ದಾರೆ. ಬೇಟೆ ಮತ್ತು ಪಶುಪಾಲನೆಯಿಂದ ಆರಂಭವಾದ ಇವರ ವೃತ್ತಿ ವ್ಯವಸಾಯ, ನಾಟಿ ಔಷಧ, ಕೂಲಿ, ವ್ಯಾಪಾರ, ಮೊದಲಾದವುಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ.

ಅನಾದಿ ಕಾಲದಲ್ಲಿ ಗಂಡು ಹೆಣ್ಣುಗಳಿಬ್ಬರೂ ಕಾಡಿನಲ್ಲಿ ಅಲೆಯುವ ಸಂದರ್ಭಗಳಲ್ಲಿ ತಮ್ಮ ಆಹಾರಕ್ಕಾಗಿ ಬೇಟೆಯನ್ನಾಡುತ್ತಿದ್ದರು. ಆಗ ಅದರಲ್ಲಿ ಮಹಿಳೆಯೂ ಕೂಡ ಭಾಗವಹಿಸಿ ಆಹಾರವನ್ನು ಪಡೆಯುವ ಪದ್ಧತಿ ಇತ್ತು. ಆದರೆ ಇಂದು ಬದಲಾವಣೆಯಾಗಿದೆ. ಇಂದಿನ ಹಬ್ಬದ ದಿನಗಳಲ್ಲಿ ವಿಶೇಷವಾಗಿ ಬೇಟೆಯಾಡುವುದು ಇವರ ಸಂಪ್ರದಾಯವಾಗಿದೆ. ಬೇಟೆಯಾಡಲು ಹೋದಾಗ ಗಂಡು ಪ್ರಾಣಿಯನ್ನೇನಾದರೂ ಬೇಟೆಯಾಡಿ ಬಂದಾಗ ಅವನಿಗೆ ಆರತಿಯನ್ನು ಎತ್ತಿ ಬೆಳಗಿ ಮನೆಯ ಒಳಗೆ ಕರೆದುಕೊಳ್ಳಲಾಗುತ್ತದೆ. ಹೀಗೆ ಆರತಿ ಬೆಳಗುವ ಗೌರವ ಸಹಜವಾಗಿಯೇ ಮಹಿಳೆಯ ಪಾಲಿನದಾಗಿರುತ್ತದೆ.

**ಪಶುಪಾಲನೆ**

ಪಶುಪಾಲನೆ ಎಂದರೆ ದನಗಳನ್ನು ಕಾಯುವುದು ಎಂದರ್ಥ. ಇದರ ಜೊತೆಯಲ್ಲಿ ಕುರಿ, ಮೇಕೆಗಳನ್ನು ಸಾಕುವುದೂ ಆಗಿದೆ. ಕಾಡುಗೊಲ್ಲರ ಮೂಲ ಕಸುಬೇ ಈ ಪಶುಪಾಲನೆಯಾಗಿದೆ. ಇದರಲ್ಲಿ ಮಹಿಳೆಯು ತನ್ನನ್ನು ತಾನು ತೊಡಗಿಸಿಕೊಂಡು ಮನೆಯ ಆರ್ಥಿಕ ಭದ್ರತೆಯನ್ನು ಕಾಪಾಡುವಲ್ಲಿ ಪ್ರಮುಖಳಾಗಿದ್ದಾಳೆ. ಬೆಳಗಿನಿಂದ ಸಾಯಂಕಾಲದವರೆಗೂ ಪಶುಪಾಲನೆಯನ್ನು ಮಾಡಿ ಸಾಂಯಕಾಲ ಹಾಲು ಕರೆದು, ಹೆಪ್ಪು ಹಾಕಿ ಮೊಸರು, ಬೆಣ್ಣೆ, ಮಜ್ಜಿಗೆಯನ್ನು ನಗರ ಪ್ರದೇಶಗಳಿಗೆ ಕೊಂಡೊಯ್ದು ಮಾರಾಟ ಮಾಡಿ ಅದರಿಂದ ಬಂದಂತಹ ಹಣವನ್ನು ಮನೆಯ ದಿನನಿತ್ಯದ ಬಳಕೆಗೆ ಬೇಕಾಗುವ ವಸ್ತುಗಳನ್ನು ತಂದು ಸಂಸಾರದ ನಿರ್ವಹಣೆಯನ್ನು ನಿರ್ವಹಿಸುವಳು. ಅದ್ದರಿಂದ ಈ ಪಶುಪಾಲನೆಗೆ ಕಾಡುಗೊಲ್ಲ ಸಮುದಾಯದವರ ಮುಖ್ಯ ಜೀವನಾಧಾರವಾದ ವೃತ್ತಿಯಾಗಿದೆ. ಇದರಲ್ಲಿ ಮಹಿಳೆಯದೇ ಸಿಂಹಪಾಲು.

**ವ್ಯವಸಾಯ:**

ಕೃಷಿ ಸಮಾಜದಲ್ಲಿರುವ ಪ್ರತಿಯೊಂದು ಸಮುದಾಯದವರ ಜೀವನಾಶ್ರಯವಾಗಿದೆ. ಹಾಗೆಯೇ ಕಾಡುಗೊಲ್ಲರಿಗೂ ಸಹ ಇದು ತಮ್ಮ ಆರ್ಥಿಕ ಸ್ಥಿರತೆಯ ಮೂಲಸ್ತಂಭವಾಗಿದೆ. ಮೊಳಕಾಲ್ಮೂರು ತಾಲ್ಲೂಕಿನಲ್ಲಿ ಬರುವ ಅದರಲ್ಲೂ ಪ್ರಸ್ತುತ ಅಧ್ಯಯನದ ಕ್ಷೇತ್ರಕಾರ್ಯ ವ್ಯಾಪ್ತಿಯಲ್ಲಿ ಬರುವ ಬಹುತೇಕ ಕಾಡುಗೊಲ್ಲರಿಗೆ ಕೇವಲ ಒಂದರಿಂದ ಐದು ಎಕರೆಯ ಒಳಗೆ ಬರುವ ರೈತರಾಗಿದ್ದಾರೆ. ಅದರಲ್ಲೂ ಮಳೆಯನ್ನೇ ಆಶ್ರಯಿಸಿ ಶೇಂಗಾ, ಬಿಳಿಜೋಳ, ನವಣೆ, ಸಜ್ಜೆ ಬೆಳೆಯುವ ಈ ಜನರಿಗೆ ಇವುಗಳಿಂದಲೇ ತಮ್ಮ ಜೀವನ ನಿರ್ವಹಣೆಯನ್ನು ಮಾಡುವರು. ಬೇಟೆ, ಪಶುಪಾಲನೆ ನಂತರ ಕಾಲಾಂತರದಲ್ಲಿ ಆದ ಬದಲಾವಣೆಯೇ ಈ ವ್ಯವಸಾಯವಾಗಿದೆ. ಹೊಲದಲ್ಲಿ ಗಂಡಸಿನ ಹಾಗೆ ಮಹಿಳೆಯೂ ಸಹ ಸಮಾನವಾಗಿ ಕೃಷಿ ಕಾರ್ಯಗಳನ್ನು ನಿರ್ವಹಿಸುವಳು. ಬಿತ್ತನೆಯ ಸಂದರ್ಭದಲ್ಲಿ ಮಧ್ಯರಾತ್ರಿಯ ಹೊತ್ತಿಗೆ ಎದ್ದು ಅಡುಗೆ ಮಾಡಿ ಬುತ್ತಿಯನ್ನು ಕಟ್ಟಿಕೊಂಡು ಹೋಗುವಾಗಿನಿಂದ ಒಡಿದು ಕಳೆತೆಗೆಯುವುದು, ಜಂತೆಹಾಕುವುದು, ಅನಂತರ ಕಟಾವು ಮಾಡುವುದು ಹೀಗೆ ಪ್ರತಿಯೊಂದೂ ಕೃಷಿ

ಕಾರ್ಯದಲ್ಲಿ ಮಹಿಳೆ ತನ್ನನ್ನು ತಾನು ತೊಡಗಿಸಿಕೊಂಡು ಹಗಲಿರಳೂ ದುಡಿದರೂ ಸಹ ತನಗೆ ಹಣದ ಅವಶ್ಯಕತೆ ಇದ್ದಾಗ ಗಂಡಸಿನ ಮುಂದೆ ಕೈಚೋಡಿಸಿ ಬೇಡುವ ಪರಿಸ್ಥಿತಿಯಲ್ಲಿದ್ದಾಳೆ.

ಈ ರೀತಿಯಾಗಿ ಮಹಿಳೆ ಅನಾದಿ ಕಾಲದಿಂದಲೂ ಇಂದಿನವರೆಗೂ ಅನೇಕ ಸ್ಥಿತ್ಯಂತರಗಳನ್ನು ಹೊಂದುತ್ತಾ ಬಂದಿದ್ದಾಳೆ. ಅಂದರೆ ಗಂಡಸಿನ ಜೊತೆಯಲ್ಲಿ ಕಾಡಿನಲ್ಲಿ ಕಾಡಾಡಿಗಳಾಗಿ ಊರುಗಳ ಪಕ್ಕದಲ್ಲಿ ಬಂದು ಹಟ್ಟಿಗಳನ್ನು ಕಟ್ಟಿಕೊಂಡು ಇಂದಿನ ಆಧುನಿಕ ಯುಗದಲ್ಲಿ ಜೀವಿಸುತ್ತಿದ್ದರೂ ಸಹ ಅವಳು ಗಂಡನ ಜೊತೆಯಲ್ಲಿ ಬೇಟೆಯಾಡುವುದರಿಂದ ಹಿಡಿದು ವ್ಯವಸಾಯವನ್ನು ಮಾಡುತ್ತಿದ್ದರೂ ಅವಳ ಗಂಡಸಿನ ಹಾಗೆ ಹೊಲಗಳಲ್ಲಿ ಕೃಷಿಕಾರ್ಯಗಳನ್ನು ಮಾಡುತ್ತಿರುವುದು ಅವಳ ಶೋಷಣೆಯೇ ಸರಿ. ಅಂದರೆ ಪತಿಯೇ ಪರದೈವ ಎಂದು ನಂಬಿ ಗಂಡಸಿಗಿಂತಲೂ ಅಧಿಕವಾಗಿ ಕೃಷಿ ಕಾರ್ಯಗಳಲ್ಲಿ ಮಹಿಳೆ ಇಂದಿಗೂ ಸಹ ತೊಡಗಿದ್ದಾಳೆ.

**ಬೆಡಗುಗಳು**

ಬೆಡಗುಗಳಿಗೆ ಕುಲ, ಮತ, ಪಂಗಡ, ಬಳಿ ಎಂದು ಕರೆಯುವುದುಂಟು. ಈ ಕಾಡುಗೊಲ್ಲ ಬುಡಕಟ್ಟಿನಲ್ಲಿ ವಿವಿಧ ಒಳಪಂಗಡಗಳಿವೆ. ಒಂದೊಂದು ಬೆಡಗಿನ ಹುಟ್ಟು, ಬೆಳವಣಿಗೆಗೆ ಒಂದೊಂದು ಕಥೆ, ಇತಿಹಾಸ, ಪುರಾಣಗಳೇ ಬೆಳೆದಿರುವ ಹಾಗೆಯೇ ಪ್ರಚಲಿತವಿರುವ ಕುಲ, ಗೋತ್ರಗಳಿಗೆ ಒಂದೊಂದು ಪ್ರಾಣಿ, ಪಕ್ಷಿ, ಗಿಡ, ಮರ, ಬಳ್ಳಿ, ಹೂವು, ಸೂರ್ಯ, ಚಂದ್ರ, ದೇವರು ಮತ್ತು ಪ್ರಾಕೃತಿಕ ಶಕ್ತಿಯ ಹೆಸರುಗಳನ್ನು ಹೊಂದಿರುತ್ತಿವೆ. ಈ ಸಮುದಾಯದಲ್ಲಿ ಮಹಿಳೆಯ ವಿವಾಹ ನಿಶ್ಚಿತವಾಗುವುದು ಬೆಡಗು ಮತ್ತು ಗೋತ್ರಗಳ ಆಧಾರದ ಮೇಲೆಯೇ. ಅವರವರ ಮನೆತನದ ವೃತ್ತಿ, ದೇವರು, ಸಂಸ್ಕೃತಿ ಮೂಲಪುರುಷ, ಇತಿಹಾಸ, ಆಚಾರ-ವಿಚಾರ, ವಿಧಿ-ನಿಷೇಧಗಳನ್ನು ತಿಳಿದುಕೊಳ್ಳಬಹುದು. ಇವರಲ್ಲಿ ಸಗೋತ್ರ, ಅಥವಾ ಸಪಿಂಡ ವಿವಾಹಪದ್ಧತಿಗಳು ನಿಷಿದ್ಧ. ವಿವಾಹ ಸಂದರ್ಭದಲ್ಲಿ ಈ ಬುಡಕಟ್ಟು ಸಮುದಾಯ ದೇವರು ಮತ್ತು ಬೆಡಗು ವಿಚಾರವಾಗಿ ಕಟ್ಟುನಿಟ್ಟಿನ ಸಂಪ್ರದಾಯ ಪಾಲಿಸುತ್ತಾರೆ. ಇವರು ಹೊರ ಪಿಂಡ ಮತ್ತು ಹೊರಬೆಡಗಿನ ವಿವಾಹ ಸಂಬಂಧಗಳನ್ನು ಬೆಳಸುತ್ತಾರೆ. ಉದಾಹರಣೆಗೆ ಕಾಡುಗೊಲ್ಲರು ಕಂಬೇರ ಬೆಡಗಿನವರು ಮಾರನವರ ಬೆಡಗಿನಲ್ಲಿ ವಿವಾಹ ಸಂಬಂಧವನ್ನು ಬೆಳೆಸುವರು.

ತಮ್ಮ ಕುಲಸ್ಥರು ಹಬ್ಬ, ಜಾತ್ರೆ, ಉತ್ಸವ, ಮದುವೆ, ಮಂಗಳ ಕಾರ್ಯಗಳಲ್ಲಿ ಭೇಟಿಯಾದಾಗ ಮೊದಲು ಆತನ ಕುಲ ಮತ್ತು ದೇವರುಗಳನ್ನು ಕೇಳಿ ತಿಳಿದುಕೊಳ್ಳುವ ಪದ್ಧತಿ ಈ ಸಮುದಾಯದಲ್ಲಿ ಕಂಡುಬರುತ್ತದೆ. ಪ್ರತಿಯೊಂದು ಕುಲಕ್ಕೆ ಒಂದೊಂದು ಗುಡಿಕಟ್ಟೆ, ಮತ್ತು ದೇವರು ಇರುತ್ತವೆ. ಈ ಗುಡಿಕಟ್ಟೆಯ ಆಧಾರದ ಮೇಲೆಯೇ ಇವರು ಅಣ್ಣ ತಮ್ಮಗಳೋ ಅಥವಾ ನೆಂಟರೋ ಎಂದು ಗುರುತಿಸಬಹುದು. ಗೊಲ್ಲರ ಬೆಡಗುಗಳು ಮೂರು ಅಜ್ಜನ ಸಂತತಿಯವರೆಂದು, ಮೂವತ್ತೆಂಟು ಕುಲಗಳೆಂದು, ಮುನ್ನೂರ ಐವತ್ತು ಕುಲಗಳೆಂದು, ಮೂರು ಸಾವಿರ ಬೆಡಗುಗಳೆಂದು, ಈ ಜನಾಂಗದ ವಂಶವೃಕ್ಷಗಳೇ ಸ್ಪಷ್ಟಪಡಿಸುತ್ತವೆ. ಬೆಡಗು ಅಥವಾ ಕುಲಗಳ ವಿಚಾರವಾಗಿ ಒಂದು ನಿರ್ದಿಷ್ಟತೆ ಕಂಡುಬರುವಂತಿಲ್ಲ. ಹಲವಾರು ಹಸ್ತಪ್ರತಿ, ಜಯರೇಖೆಗಳನ್ನು ಪರಿಶೀಲಿಸಿದಾಗ್ಯೂ ಮತ್ತು ಜನಾಂಗದ ಹಿರಿಯರನ್ನು ಸಂದರ್ಶಿಸಿದಾಗಲೂ ಪ್ರಾದೇಶಿಕ ಭಿನ್ನಾಭಿಪ್ರಾಯಗಳನ್ನು ಸೂಚಿಸುತ್ತಾರೆ.

**ರಕ್ತಸಂಬಂಧ ಬಾಂದವ್ಯ**

'ಕಣ್ಣರಿಯದಿದ್ದರೂ ಕಳ್ಳರಿಯುತ್ತದೆ' ಎಂಬ ಜಾನಪದ ಮಾತಿನಂತೆ ಕಾಡುಗೊಲ್ಲ ಸಮುದಾಯದಲ್ಲಿ ಕರುಳ ಬಳ್ಳಿಯ ಸಂಬಂಧ ಮತ್ತು ರಕ್ತ ಸಂಬಂಧಗಳಿಗೆ ಹೆಚ್ಚಿನ ಪ್ರಾಮುಖ್ಯತೆಯಿದೆ. ಕುಟುಂಬ, ವಂಶ, ಬಳಿ, ಬೆಡಗು ಮುಂತಾಗಿ ಸಮುದಾಯ ರಕ್ತ ಸಂಬಂಧದ ಆಧಾರದ ಮೇಲೆ ರಚಿತವಾಗಿದೆ. ಇದರ ಮೇಲೆಯೇ ಬಂಧು, ಮೈತ್ರಿತ್ವದ ಮದುವೆ, ಮಂಗಳ ಕಾರ್ಯಗಳು ಬೆಳೆದಿರುತ್ತವೆ. ಪ್ರೇಮದ ತಳಹದಿಯ ಮೇಲೆ ಸಹಕಾರ ಮತ್ತು ಸಂಬಂಧ, ಸೋದರ ಅತ್ತೆಗೆ ವಿಶೇಷ ಮಹತ್ವ ಕೊಡುತ್ತಾರೆ. ಯಾವುದೇ ಕೌಟುಂಬಿಕ ಮತ್ತು ಧಾರ್ಮಿಕ ಕಾರ್ಯಗಳಲ್ಲಿ ಐಕ್ಯತೆ, ಒಗ್ಗಟ್ಟು ಮತ್ತು ಸಹಕಾರ ಭಾವನೆ ಕೆಲವೊಂದು ಸಲ ಕುಲ, ಬಳಿ, ಬೆಡಗುಗಳು ಬೇರೆ ಬೇರೆ ಇದ್ದರೂ ಸಹೋದರ ಭಾವನೆಯಿಂದ ವರ್ತಿಸುತ್ತಾರೆ.

ಒಳಪಂಗಡ ವಿವಾಹ ಅಥವಾ ಒಳಬಾಂಧವ್ಯ ವಿವಾಹ ಪದ್ಧತಿಗೆ ಹೆಚ್ಚು ಮಹತ್ವ ಕೊಡುತ್ತಾರೆ. ತಂದೆಯಷ್ಟೇ ಗೌರವ ಸೋದರತ್ತೆಗೆ ಕೊಡುವ ಸಂಪ್ರದಾಯ ಬೆಳೆದುಬಂದಿದೆ. ಈ ಸಮುದಾಯದಲ್ಲಿ 'ಸೋದರತ್ತೆ ತಾಯಿ ಸತ್ತ ಮಕ್ಕಳಿಗೆ ತಾಯಿ' ಎಂಬ ಮಾತು ರಕ್ತ ಸಂಬಂಧದ ಮಹತ್ವವನ್ನು ತಿಳಿಸುತ್ತದೆ. ಈ ಸಮುದಾಯದಲ್ಲಿ ಹಟ್ಟಿಯಿಂದ ಹೊರಗೆ ಹೆಣ್ಣು ಕೊಡುವುದಾಗಲೀ, ತರುವುದಾಗಲೀ ನಿಷಿದ್ಧವಾಗಿತ್ತು. ಆದರೆ ಈ ಪದ್ಧತಿ ಇಂದು ಸಂಪೂರ್ಣ ಬದಲಾಗಿದ್ದು ಹೊರಗಡೆ ಹೆಣ್ಣುಕೊಡುವುದನ್ನು ಮತ್ತು ಹೆಣ್ಣುತರುವ ಪದ್ಧತಿಯನ್ನು ಮೈಗೂಡಿಸಿಕೊಂಡಿದ್ದಾರೆ. ಪ್ರಾಚೀನ ಭಾರತೀಯ ಸಮಾಜದಲ್ಲಿ ಬಾಲ್ಯವಿವಾಹ ಪದ್ಧತಿ ಅಸ್ತಿತ್ವಕ್ಕೆ ಬಂದಿದ್ದು ಈ ರಕ್ತ ಸಂಬಂಧವೂ ಒಂದು ಕಾರಣವಾಗಿದೆ. ಇದಕ್ಕೆ ಪ್ರಮುಖ ಕಾರಣ ಈ ಸಮುದಾಯದಲ್ಲಿರುವ ಗೊಡ್ಡು ಸಂಪ್ರದಾಯಗಳು, ಮೂಢನಂಬಿಕೆಗಳಾಗಿವೆ. ಹಿರಿಯ ಯಜಮಾನರು ತಾವು ಸಾಯುವುದರೊಳಗೆ ಮಕ್ಕಳ ಮದುವೆ ಮಾಡಬೇಕು ಎಂಬ ತತ್ವವು ರಕ್ತಸಂಬಂಧದ ಪ್ರಾಮುಖ್ಯತೆಯನ್ನು ತಿಳಿಸುತ್ತದೆ.

ಹುಟ್ಟು ಸಾವು ಮತ್ತು ಬದುಕು ಈ ಮೂರರಲ್ಲಿಯೂ ರಕ್ತಸಂಬಂಧದ ಭಾವನೆಗಳು ಪ್ರಧಾನವಾಗಿರುತ್ತವೆ. ಉದಾಹರಣೆಗೆ ನಾಮಕರಣದಲ್ಲಿ ಸೋದರತ್ತೆ ತೊಟ್ಟಿಲು ಪೂಜೆ ಮಾಡುವುದು, ಜವಳ ತೆಗೆಸುವಾಗ ತವರು ಮನೆಯವರು ಉಡುಗೊರೆ ತರುವುದು, ವಿವಾಹ ಸಂದರ್ಭದಲ್ಲಿ ಸೋದರ ಮಾವನಿಗೆ ಪ್ರಥಮ ಆದ್ಯತೆ ಕೊಡುವುದು, ಗಂಡಸು ಮರಣವನ್ನಪ್ಪಿದ ಸಂದರ್ಭದಲ್ಲಿ ವಿಧವೆ ಕಾಡುಗೊಲ್ಲ ಮಹಿಳೆ ಕಾರ್ಯಗಳನ್ನು ಮಾಡುವಲ್ಲಿ ಪ್ರಧಾನ ಪಾತ್ರ ವಹಿಸುವುದನ್ನು ಕಾಣಬಹುದಾಗಿದೆ.

ವೈಯಕ್ತಿಕವಾಗಿ ಎಷ್ಟೇ ದ್ವೇಷ, ಅಸೂಯೆಗಳಿದ್ದರೂ ಸಾವು ನೋವಿನಲ್ಲಿ ಹತ್ತಿರ ಬರುವ ವ್ಯಕ್ತಿಗಳೆಂದರೆ ರಕ್ತಸಂಬಂಧಿಗಳು. ಈ ರಕ್ತ ಸಂಬಂಧದ ಆಧಾರದ ಮೇಲೆಯೇ ಕುಟುಂಬದ ಆಂತರಿಕ ಮತ್ತು ಬಾಹ್ಯ ಸಂಬಂಧಗಳು ಬೆಳೆಯುತ್ತವೆ.

**ಕಾಡುಗೊಲ್ಲರ ಬೆಡಗು ಅಥವಾ ಕುಲಗಳು**

೧. ಅಜ್ಜಿಯರ ಗೊಲ್ಲರು
೨. ಅರಸಿನ ಗೊಲ್ಲರು
೩. ಆರೇನವರ ಗೊಲ್ಲರು
೪. ಕಂಬೇರ ಗೊಲ್ಲರು
೫. ಜಬೇರ ಗೊಲ್ಲರು
೬. ಕರಿಮುತ್ತಿ ಗೊಲ್ಲರು
೭. ಮಾರನವರ ಗೊಲ್ಲರು
೮. ಬುಗಡಿವರ ಗೊಲ್ಲರು
೯. ಸನ್ನಮುತ್ತಿ ಗೊಲ್ಲರು
೧೦. ಚಂದ್ರಮತ್ತಿಗೊಲ್ಲರು
೧೧. ಹಟ್ಟಿ ಗೊಲ್ಲರು
೧೨. ಹರೆ ಗೊಲ್ಲರು
೧೩. ಹೂವಿನಾರು ಗೊಲ್ಲರು
೧೪. ಹೊನ್ನೇರ ಗೊಲ್ಲರು

**ಕುಟುಂಬ ಪದ್ಧತಿ**

ಕುಟುಂಬವು ಒಂದು ಸಾಮಾಜಿಕ ಸಂಸ್ಥೆಯಾಗಿದ್ದು ಅದು ಮಾನವನ ಸಾಮಾಜಿಕ ಜೀವನದ ತಳಹದಿಯಾಗಿದೆ. ಕುಟುಂಬಕ್ಕೂ ಸಮಾಜಕ್ಕೂ ಬಹಳಷ್ಟು ಅವಿನಾಭಾವ ಸಂಬಂಧವಿದೆ. ನಮ್ಮ ಸಾಮಾಜಿಕ ಜೀವನಕ್ಕೆ ಒಂದು ನೆಲೆಯನ್ನು ಸ್ಥಿರತೆಯನ್ನು ಕೊಡುವ ಕುಟುಂಬ ಉಳಿದೆಲ್ಲಾ ಸಂಸ್ಥೆಗಳಿಗಿಂತ ಇದು ಹೆಚ್ಚು ಶಾಶ್ವತ, ಪ್ರಭಾವಶಾಲಿಯೂ ಆಗಿರುತ್ತದೆ. ಮಾನವನು ಶೈಶವದಲ್ಲಿದ್ದಾಗ ಯಾವ ಕೆಲಸಗಳನ್ನು ಮಾಡದೆ ಹೇಗೆ ಅಸಹಾಯಕನಾಗಿರುತ್ತಾನೆಯೋ ಅಂತಹವನನ್ನು ರಕ್ಷಿಸಿ, ಅವನನ್ನು ಅಭಿವೃದ್ಧಿಪಡಿಸುವ ಹೊಣೆಗಾರಿಕೆಯನ್ನು ತಾಯಿಮಕ್ಕಳ ನಡುವಿನ ಜೈವಿಕ ಸಂಬಂಧವೂ ಸಹ ಕುಟುಂಬ ರಚನೆಗೆ ಪ್ರೇರಣೆಯಾಗಿದೆ. ಮಾನವನ ಬಹುಮುಖ್ಯ ಮೂರು ಅವಶ್ಯಕತೆಗಳಾದ ಲೈಂಗಿಕ ತೃಪ್ತಿ, ಸಂತಾನಾಭಿಲಾಷೆ ಮತ್ತು ಆರ್ಥಿಕ ಬಯಕೆಗಳನ್ನು ನಿರ್ದಿಷ್ಟರೀತಿಯಲ್ಲಿ ಅನುಭೋಗಿಸಲು ಮತ್ತು ನಿಯಂತ್ರಿಸಲು ಕುಟುಂಬ ಸಹಾಯ ಮಾಡುತ್ತದೆ.

ಮೊಳಕಾಲ್ಮೂರು ತಾಲ್ಲೂಕಿನ ಪ್ರದೇಶದಲ್ಲಿ ಬರುವ ಎಲ್ಲಾ ಕುಟುಂಬಗಳು ಪಿತೃಪ್ರಧಾನ, ಪಿತೃವಂಶೀಯ ಮತ್ತು ಪಿತೃಸ್ಥಾನೀಯ ಕುಟುಂಬಗಳಾಗಿವೆ. ಇಲ್ಲಿ ಬಂಧುತ್ವ ಮತ್ತು ಆಸ್ತಿಯ ಹಂಚಿಕೆ ಪುರುಷರ ಮೂಲಕ ಆಗುವುದಲ್ಲದೆ, ಪುರುಷನೇ ಕುಟುಂಬದ ಯಜಮಾನನಾಗಿರುತ್ತಾನೆ. ಮಹಿಳೆಗೆ ಸಂಪೂರ್ಣ ಸ್ವಾತಂತ್ರ್ಯವಿರುವುದಿಲ್ಲ. ಆದರೆ ವಾಸ್ತವಿಕವಾಗಿ ಬುಡಕಟ್ಟು ಜನಾಂಗದ ಈ ಕಾಡುಗೊಲ್ಲ ಸಮುದಾಯದಲ್ಲಿ ಮಹಿಳೆಗೆ ಹೆಚ್ಚಿನ ಗೌರವವಿರುವುದನ್ನು ಕಾಣಬಹುದು. ಇಲ್ಲಿ ಪುರುಷನು ಮನೆಯ ಯಜಮಾನನಾದರೂ ಮನೆಯ ಜವಾಬ್ದಾರಿ ಮತ್ತು ಹೆಚ್ಚಿನ ಸ್ಥಾನಮಾನಗಳು ಮಹಿಳೆಯೇ ಹೊಂದಿದ್ದಾಳೆ. ಹಾಗಾಗಿ ಇವರು ಮಹಿಳೆಯನ್ನು ಕೀಳಾಗಿ ಕಾಣಲಾರದೆ ಇರುವುದು ಈ ಬುಡಕಟ್ಟು ಜನರ ಪ್ರಮುಖ ಲಕ್ಷಣವಾಗಿದೆ. ಇವರಲ್ಲಿ ಹತ್ತಿರದ ರಕ್ತಸಂಬಂಧದಲ್ಲಿ ವಿವಾಹ ಏರ್ಪಡಿಸುತ್ತಾರೆ. ಏಕಪತ್ನಿತ್ವ ಮತ್ತು ಬಹುಪತ್ನಿತ್ವ ವಿವಾಹಗಳು ಕಂಡುಬಂದರೂ ಪ್ರಸ್ತುತ ಅಧ್ಯಯನಕ್ಕಾಗಿ ಕೈಗೊಂಡ ಕ್ಷೇತ್ರಕಾರ್ಯದಲ್ಲಿ ಎಲ್ಲಿಯೂ ಬಹುಪತ್ನಿತ್ವ ಕಂಡುಬಂದಿಲ್ಲ. ಇವರಲ್ಲಿ ವರದಕ್ಷಿಣೆ ಪದ್ಧತಿ ಆಚರಣೆಯಲ್ಲಿಲ್ಲ. ಕನ್ಯಾಶುಲ್ಕ ಅಥವಾ ತೆರಕೊಟ್ಟು ಹೆಣ್ಣು ತರುವ ಸಂಪ್ರದಾಯ ಇಂದಿಗೂ ಸಹ ಆಚರಣೆಯಲ್ಲಿದೆ. ಒಂದೊಂದು ಸಲ ಕನ್ಯಾಶುಲ್ಕ ನೀಡಲಾರದಂತ ಸಂದರ್ಭದಲ್ಲಿ ವಿವಾಹಗಳೂ ಸಹ ಮುರಿದುಬೀಳುತ್ತಿದ್ದವಂತೆ. ಆದರೆ ಇಂದು ಕಾಟಾಚಾರಕ್ಕೆಂಬಂತೆ ವಧುದಕ್ಷಿಣೆ ಆಚರಣೆಯಲ್ಲಿರುವುದನ್ನು ಗಮನಿಸಿದರೆ ಈ ಸಮುದಾಯದಲ್ಲಿ ಮಹಿಳೆ ಎಷ್ಟರಮಟ್ಟಿಗೆ ಪ್ರಾಮುಖ್ಯತೆಯನ್ನು ಕೊಡುತ್ತಿದ್ದಾರೆ ಎಂಬುದು ನಮ್ಮ ಗಮನಕ್ಕೆ ಬಾರದೇ ಇರಲಾರದು. ಇಲ್ಲಿ ಶೋಷಣೆ ಕಡಿಮೆ ಎಂದು ಹೇಳಬಹುದು. ವಿವಾಹವಾದ ನಂತರ ಹೆಣ್ಣು ತನ್ನ ಗಂಡನ ಮನೆಯಲ್ಲಿಯೇ ವಾಸಿಸುತ್ತಾಳೆ. ಕುಟುಂಬದಲ್ಲಿ ಹಿರಿಯ ಸೊಸೆಗೆ ಹೆಚ್ಚಿನ ಗೌರವ ಆದ್ಯತೆಯನ್ನು ಕಾಣಬಹುದು.

### ವಿಧಿ-ನಿಷೇಧಗಳು

ಮಾನವನ ನಡತೆಯನ್ನು ರೂಪಿಸಲು ಮತ್ತು ನಿಯಂತ್ರಿಸಲು ಸಮಾಜವು ಸ್ಥಾಪಿಸುವ ಕಟ್ಟುಪಾಡುಗಳೇ ವಿಧಿ-ನಿಷೇಧಗಳು. ಇವು ಯಾವ ಸಂದರ್ಭದಲ್ಲಿ ಮನುಷ್ಯರು ಏನುಮಾಡಬೇಕು ಮತ್ತು ಏನುಮಾಡಬಾರದು ಎಂಬುದನ್ನು ಈ ವಿಧಿ-ನಿಷೇಧಗಳು ತಿಳಿಸುವವು. ಇದನ್ನು ವಿಶಾಲಾರ್ಥದಲ್ಲಿ ಬಳಸಿ ನೋಡಿದಾಗ ಸಂಪ್ರದಾಯ, ನಂಬಿಕೆ, ಆಚರಣೆ, ಲೈಂಗಿಕತೆ, ವಿವಾಹ, ಜನನ, ಋತುಮತಿ, ಹೆರಿಗೆ, ಆಹಾರ, ಮರಣ, ವೇಷಭೂಷಣ, ದೇವರು, ಜಾತ್ರೆ, ನಾಮಕರಣ, ವಸತಿ, ವೃತ್ತಿ, ಮೊದಲಾದವುಗಳನ್ನು ಮನುಷ್ಯ ತನಗೆ ಮನಬಂದಂತೆ ಆಚರಿಸುವುದನ್ನು ತಡೆಯುವಲ್ಲಿ ಈ ವಿಧಿ-ನಿಷೇಧಗಳು ಸಹಕಾರಿಯಾಗಿವೆ.

ಈ ವಿಧಿ-ನಿಷೇಧಗಳು ಮಾನವನ ಸಾಮಾಜಿಕ ವ್ಯವಸ್ಥೆಗೆ ಭದ್ರತೆಯನ್ನು ಮತ್ತು ಸ್ಥಿರತೆಯನ್ನು ನೀಡುವುದರಿಂದ ಬುಡಕಟ್ಟು ಸಮುದಾಯವಾದ ಕಾಡುಗೊಲ್ಲರು ಸಾಮಾಜಿಕ ಜೀವನ ಮತ್ತು ಧಾರ್ಮಿಕ ಆಚರಣೆಯಲ್ಲಿ ಈ ವಿಧಿ-ನಿಷೇಧಗಳಿಗೆ ಮಹತ್ವ ಕೊಟ್ಟು ಬದ್ಧರಾಗಿ ನಡೆದುಕೊಳ್ಳುವರು. ಇದರಲ್ಲಿ ಮಹಿಳೆಯ ಹುಟ್ಟಿನಿಂದ ಸಾವಿನವರೆಗೆ ಹಲವು ಬಗೆಯ ಕಟ್ಟುನಿಟ್ಟಾದ ನಿಷೇಧಗಳು ಈಕೆಯ ಮೇಲೆ ಹೆಚ್ಚು ಇರುವುದನ್ನು ಕಾಣಬಹುದಾಗಿದೆ.

### ವಿಧಿಗಳು

ವಿಧಿ ಎಂದರೆ ಮಾಡಲೇಬೇಕಾದ ನಿಯಮ ಅಥವಾ ಅನುಸರಿಸಲೇ ಬೇಕಾದ ಮಾರ್ಗವಾಗಿದೆ. ಇದನ್ನು ಆಜ್ಞೆ, ಹಣೆಬರಹ, ವಿಧಿಲಿಖಿತ ಮೊದಲಾದ ಅರ್ಥಗಳಲ್ಲಿ ಕರೆಯುವರು. ಇಲ್ಲಿ ನಿಯಮಗಳ ಅರ್ಥದಡಿಯಲ್ಲಿ ನಮ್ಮ ನಡತೆ ಹೀಗೆ ಇರಬೇಕು. ನಾವು ಹೀಗೆ ಮಾಡಬೇಕು ಎಂದು ನಿಗಧಿಪಡಿಸುತ್ತಾರೆ. ಒಂದು ಸಮುದಾಯದ ಕಡ್ಡಾಯ ಆಚರಣೆಗಳು ವಿಧಿಗಳಾಗಿ ಪರಿವರ್ತನೆಯಾಗುವುದರಿಂದ ಕಾಡುಗೊಲ್ಲ ಸಮುದಾಯಕ್ಕೆ ಸಂಬಂಧಪಟ್ಟ ಕಟ್ಟುನಿಟ್ಟಾದ ವಿಧಿನಿಯಮಗಳನ್ನು ಪಾಲಿಸುವುದು ಕಂಡುಬರುತ್ತದೆ.

ಮದುವೆಯಾಗಿ ಒಂದು ವರ್ಷದೊಳಗೆ ಹೆಂಗಸರ ಬಲಗೈಯಲ್ಲಿ ಗೊಲ್ಲಕಡಗ ಇರಬೇಕು. ಹಟ್ಟಿಯಿಂದ ಹೊರಗೆ ಹೆರಿಗೆ ಮಾಡಿಸಬೇಕು. ಮುಟ್ಟಾದ ಹೆಣ್ಣು ಮನೆಯಿಂದ ಅಂದರೆ ಹಟ್ಟಿಯಿಂದ ಹೊರಗೆ ಇರಬೇಕು.

ಕನ್ಯಾಶುಲ್ಕ ಕೊಟ್ಟು ಹೆಣ್ಣು ತರಬೇಕು. ಮೈನೆರೆತ ಹೆಣ್ಣಿಗೆ ಸೋದರಮಾವನೇ ಹಸಿರುಗುಡ್ಲು ಕಟ್ಟಬೇಕು. ಧಾರೆ ಮುಹೂರ್ತಕ್ಕೆ ಸೋದರ ಮಾವನೇ ವಧುವನ್ನು ಕರೆತರಬೇಕು. ನಾಮಕರಣವಿದ್ದಲ್ಲಿ ಮಗುವಿನ ಸೋದರತ್ತೆ ತೊಟ್ಟಿಲು ಪೂಜೆ ಮಾಡಬೇಕು. ಕುರಿ ಹಟ್ಟಿ ಅಥವಾ ದೇವರ ಪೌಳಿಯಲ್ಲಿ ಜವಳ ತೆಗೆಸಬೇಕು. ಸತ್ತ ಮಾತಾಪಿತೃಗಳ ದಿನಕರ್ಮಗಳನ್ನು ಮಾಡಬೇಕು. ಮನೆದೇವರ ವಾರದ ದಿನ ನೆಲ ಸಾರಣೆ ಮಾಡಬೇಕು. ಈ ರೀತಿಯಾಗಿ ಕಾಡುಗೊಲ್ಲ ಸಮುದಾಯದಲ್ಲಿ ವಿಧಿಗಳು ಮಹಿಳೆಯ ಮೇಲೆಯೇ ಹೆಚ್ಚು ಕಂಡುಬರುವುದರ ಜೊತೆಗೆ ಅವಳ ಸಾಮಾಜಿಕ ಜೀವನದಲ್ಲಿ ಅನೌಪಚಾರಿಕ ನಿಯಮಗಳಾಗಿ ಕಾರ್ಯ ನಿರ್ವಹಿಸುತ್ತವೆ.

### ನಿಷೇಧ

ನಿಷೇಧ ಎಂದರೆ ಇಂಥವನ್ನ ಮಾಡಬಾರದು ಅಥವಾ ಬಹಿಷ್ಕರಿಸು ಎಂದರ್ಥ. ಈ ಪದಕ್ಕೆ ವಿರೋಧ, ನಿರಾಕರಣೆ, ಬಹಿಷ್ಕಾರ, ಪ್ರತಿಭಟನೆ, ಅಡ್ಡಿ, ಸಲ್ಲದು, ಬಿಡುಗಡೆ ಎಂಬ ಅರ್ಥಗಳಿದ್ದರೂ ಬಹಿಷ್ಕಾರಾಜ್ಞೆ ಎಂಬ ಅರ್ಥದಲ್ಲಿ ಅಧ್ಯಯನಿಸಲಾಗಿದೆ.

ಸಮುದಾಯ ತಿರಸ್ಕರಿಸಲ್ಪಟ್ಟ ಸಾಮಾಜಿಕ ನಿಯಮಗಳೇ ನಿಷೇಧಗಳಾಗಿರುತ್ತವೆ. ಹಟ್ಟಿ, ಗ್ರಾಮ, ಕುಲ, ಧರ್ಮ, ದೇವರು ಮತ್ತು ಬೆಡಗುಗಳಿಗೆ ವಿರೋಧವಾಗಿರುವ ಯಾವುದೇ ಆಚರಣೆಗಳಿದ್ದರೂ ಕಾಡುಗೊಲ್ಲ ಸಮುದಾಯ ಬಹಿಷ್ಕರಿಸುವುದರಿಂದ ಇದಕ್ಕೆ ಸಂಬಂಧಿಸಿದ ನಿಷೇಧಗಳನ್ನು ಇಲ್ಲಿ ಕಾಣಬಹುದು.

ಗಂಡಸತ್ತರೂ ಮಹಿಳೆ ಗೊಲ್ಲಕಡಗ ತೆಗೆಯಬಾರದು, ಹಂದಿ, ಕೋಳಿ, ಹಟ್ಟಿ ಪ್ರವೇಶಿಸಬಾರದು. ಸಪಿಂಡಕ್ಕೆ ಸೇರಿದವರು ಮದುವೆಯಾಗಬಾರದು. ಹರಿಜನರು ಹಟ್ಟಿ ಪ್ರವೇಶಿಸಬಾರದು, ಮಂಗಳ ಕಾರ್ಯಗಳಲ್ಲಿ ಹೆಂಗಸರು ತಲೆಯ ಮೇಲಿನ ಸೆರಗು ತೆಗೆಯಬಾರದು, ಸೂತಕದ ಹೆಣ್ಣು ಶುಭ ಕಾರ್ಯಮಾಡಬಾರದು, ಹುಟ್ಟು, ಸಾವು, ಮೈನೆರೆತಾಗ ಮಂಗಳಕಾರ್ಯ ಮಾಡಬಾರದು, ಖಾಲಿ ಚಂಬುವಿನಲ್ಲಿ ಹಾಲು ಕರೆಯಬಾರದು, ದೇವರಿಗೆ ಅಂಟುಮುಟ್ಟು ಮಾಡಬಾರದು, ಜಾಡಿ ಕಂಬಳಿಯ ಮೇಲೆ ಕುಳಿತುಕೊಳ್ಳಬಾರದು...ಹೀಗೆ.

ಈ ರೀತಿಯ ಹಲವು ಬಗೆಯ ನಿಷೇಧಗಳನ್ನು ಕಾಡುಗೊಲ್ಲ ಬುಡಕಟ್ಟಿನಲ್ಲಿ ಕಂಡುಬರುತ್ತದೆ. ಆದರೆ ಈ ವಿಧಿ-ನಿಷೇಧಗಳ ಸಂಸ್ಕೃತೀಕರಣ ಮತ್ತು ನಗರೀಕರಣದ ಪ್ರಭಾವದಿಂದ ಪ್ರಸ್ತುತ ಸಮಾಜದಲ್ಲಿ ಕಣ್ಮರೆಯಾಗುತ್ತಿದ್ದರೂ ಕಾಡುಗೊಲ್ಲ ಸಮುದಾಯದಲ್ಲಿ ಇಂತಹ ಹಲವಾರು ನಂಬಿಕೆ, ಆಚರಣೆಗಳು, ವಿಧಿ ನಿಷೇಧಗಳು ಇಂದಿಗೂ ಉಳಿಸಿಕೊಂಡು ಬರುತ್ತಿದ್ದಾರೆ. ಈ ವಿಧಿನಿಷೇಧಗಳು ಹೆಚ್ಚಾಗಿ ಮಹಿಳೆಯ ಮೇಲೆ ಪರಿಣಾಮವನ್ನು ಬೀರುತ್ತಿವೆ.

### ನ್ಯಾಯ ಪದ್ಧತಿ

ಮಾಡಿದ ತಪ್ಪಿಗೆ ಶಿಕ್ಷೆ ವಿಧಿಸುವ ಪದ್ಧತಿ ಪ್ರತಿಯೊಂದು ಬುಡಕಟ್ಟಿನಲ್ಲಿಯೂ ಇದೆ. ಶಿಕ್ಷೆಯ ಪ್ರಮಾಣ ಅಂದರೆ ಶಿಕ್ಷೆಯ ವಿಧಾನ ಒಂದು ಸಮುದಾಯದಿಂದ ಮತ್ತೊಂದು ಸಮುದಾಯಕ್ಕೆ ಭಿನ್ನವಾಗಿರುತ್ತದೆ. ಇದೇ ರೀತಿ ಕಾಡುಗೊಲ್ಲ ಬುಡಕಟ್ಟು ಸಮುದಾಯದಲ್ಲಿನ ಜನರು ಪ್ರಾಣಕ್ಕಿಂತ ಮಾನವೇ ಹೆಚ್ಚು ಎಂಬ ಸಿದ್ಧಾಂತಕ್ಕೆ ಅಂಟಿಕೊಂಡವರಾಗಿದ್ದಾರೆ. ಪುರುಷ ಪ್ರಧಾನವಾದ ಈ ಸಮುದಾಯದಲ್ಲಿ ಮಹಿಳೆಯ ಪರ ನ್ಯಾಯಕ್ಕಿಂತ ಪುರುಷರಿಗೇ ಹೆಚ್ಚು ಶಿಕ್ಷೆಯ ಪ್ರಮಾಣ ಕಡಿಮೆ ಇರುವುದನ್ನು ನಾವು ಗಮನಿಸಬಹುದು. ಹಿಂದಿನ ಕಾಲದಲ್ಲಿ ಈ ಸಮುದಾಯದಲ್ಲಿ ನ್ಯಾಯ ತೀರ್ಮಾನಗಳು ತಮ್ಮ ತಮ್ಮ ಹಟ್ಟಿಗಳಲ್ಲಿಯೇ ಹಟ್ಟಿಯ ಗೌಡ, ಹಿರಿಯ, ಪೂಜಾರಿ ಇವರ ಸಮ್ಮುಖದಲ್ಲಿ ತೀರ್ಮಾನವಾಗುತ್ತಿದ್ದವು. ಇವರು ಬೇರೆ ಕಡೆ ಅಂದರೆ ಅರಕ್ಷಕ ಠಾಣೆಗಾಗಲೀ, ಕೋರ್ಟು ಕಛೇರಿಗಳಿಗೆ ಹೋಗದೆ ತಮ್ಮಲ್ಲಿಯೇ ನ್ಯಾಯ ತೀರ್ಮಾನವನ್ನು ಮಾಡಿಕೊಳ್ಳುವ ಸಂಪ್ರದಾಯವನ್ನು ರೂಡಿಸಿಕೊಂಡಿದ್ದರು.

ಕಾಡುಗೊಲ್ಲರ ಒಂದೊಂದು ಕುಲ ಅಥವಾ ಬೆಡಗುಗಳಿಗೆ ಇರುವ ಹಟ್ಟಿಯ ದೇವಸ್ಥಾನ 'ಗುಡಿಕಟ್ಟೆ' ಎಂದಾದರೆ, ಇಂತಹ ಹಲವಾರು ಗುಡಿಕಟ್ಟೆಗಳು ಸೇರಿ ಸತ್ಯಮನೆ ನಿರ್ಮಾಣವಾಗಿರುತ್ತವೆ. ಇವರಲ್ಲಿ ಮೂರು ಕಟ್ಟೆಮನೆಗಳು, ಐದುಗುಡಿಕಟ್ಟೆಗಳು, ಬಹಳ ಮುಖ್ಯವಾದವುಗಳು. ಇವರಲ್ಲಿ ಎಂಥದ್ದೇ ದೊಡ್ಡ

ಅಪರಾಧಗಳಿದ್ದರೂ ಅವೆಲ್ಲವೂ ಸಹ ತಮ್ಮ ನ್ಯಾಯ ತೀರ್ಮಾನಗಳನ್ನು ಈ ಗುಡಿಕಟ್ಟೆ ಅಥವಾ ಕಟ್ಟೆಮನೆಗಳಲ್ಲಿ ಇಲ್ಲವೆ ಗುರುಸ್ಥಾನ ಗಳಲ್ಲಿ ಅಪರಾಧಕ್ಕೆ ತಕ್ಕ ಶಿಕ್ಷೆಯ ರೂಪದಲ್ಲಿ ಬಗೆಹರಿಸಿಕೊಳ್ಳುತ್ತಿದ್ದರು. ಸಣ್ಣಪುಟ್ಟ ವ್ಯಾಜ್ಯಗಳಿದ್ದರೆ ಗುಡಿಕಟ್ಟೆಯಲ್ಲಿ, ಗಂಬೀರ ಅಪರಾಧಗಳಿದ್ದರೆ, ಕಟ್ಟೆಮನೆಗಳಲ್ಲಿ ಹಾಗೂ ಗುರುಸ್ಥಾನಗಳಲ್ಲಿಯೂ ನ್ಯಾಯ ತೀರ್ಮಾನವನ್ನು ಮಾಡುತ್ತಿದ್ದರು. ಈ ರೀತಿಯ ನ್ಯಾಯ ತೀರ್ಮಾನ ಮಾಡುವಲ್ಲಿ ಯಜಮಾನ, ದೊರೆ, ಗೌಡ, ಪೂಜಾರಿ ಮೊದಲಾದ ಹುದ್ದೆ ಅಥವಾ ಅಧಿಕಾರ ಅನುವಂಶೀಯವಾಗಿ ಒಬ್ಬರಿಂದ ಇನ್ನೊಬ್ಬರಿಗೆ ವರ್ಗಾವಣೆಗೊಳ್ಳುತ್ತಿತ್ತು.

ಈ ಸಮುದಾಯದಲ್ಲಿ ಕಟ್ಟುನಿಟ್ಟಾದ ಒಳಾಡಳಿತ ನ್ಯಾಯ ಪದ್ಧತಿ ಇದ್ದುದರಿಂದ ಇವರಲ್ಲಿ ಯಾವುದೇ ಸಂಘರ್ಷಗಳಾದರೂ ಕೂಡ ಹಟ್ಟಿಯಿಂದ ಹೊರಗೆ ಹೋಗದೆ ಹಟ್ಟಿಯಲ್ಲಿಯೇ ಯಜಮಾನರುಗಳಿಂದ ನ್ಯಾಯ ತೀರ್ಮಾನಗಳಾಗುತ್ತಿದ್ದವು. ಇದು ಈ ಸಮುದಾಯದ ಐಕ್ಯತೆ ಮತ್ತು ಒಗ್ಗಟ್ಟನ್ನು ಪ್ರತಿನಿಧಿಸುವ ಅಂಶವಾಗಿದೆ. ಉದಾಹರಣೆಗೆ ಯಾವುದಾದರೂ ಮನೆತನದಲ್ಲಿ ಕಲಹವುಂಟಾಗಿದ್ದರೆ, ಸತಿಪತಿಯರ ಮಧ್ಯದಲ್ಲಿ ಮನಸ್ತಾಪಗಳಾಗಿದ್ದರೆ, ಅಂತರ್‌ಜಾತಿ ವಿವಾಹ, ವಿಧವೆ, ಅನೈತಿಕ ಸಂಬಂಧವನ್ನು ಇಟ್ಟುಕೊಂಡಿದ್ದರೆ, ಸಪಿಂಡದಲ್ಲಿ ವಿವಾಹವಾದರೆ ಈ ಸಮುದಾಯದ ಮಹಿಳೆ ಬೇರೆ ಸಮುದಾಯದವನೊಡನೆ ಸಂಬಂಧವಿಟ್ಟುಕೊಂಡಿದ್ದರೆ, ಯಜಮಾನ ಅಥವಾ ಪೂಜಾರಿಗೆ ಅವಮಾನ ಮಾಡಿದರೆ ಮುಂತಾದ ಸಮುದಾಯ ಬಾಹಿರ ಕಾರ್ಯಗಳನ್ನು ಮಾಡಿದ ಮಹಿಳೆಗೆ ಅಥವಾ ವ್ಯಕ್ತಿಗೆ ದಂಡ, ಶಿಕ್ಷೆ ಮತ್ತು ಬಹಿಷ್ಕಾರ ವಿಧಿಸುತ್ತಿದ್ದರಿಂದ ಜನರು ಹೆದರಿ ತಮ್ಮ ಸಮುದಾಯದ ನಿಯಮಗಳನ್ನು ಕಟ್ಟುನಿಟ್ಟಾಗಿ ಅನುಸರಿಸುತ್ತಿದ್ದರು.

ಹಟ್ಟಿಯ ಮಹಿಳೆ ಕೀಳುಜಾತಿಯ ಪುರುಷನೊಂದಿಗೆ ಲೈಂಗಿಕ ಸಂಪರ್ಕ ಇಟ್ಟುಕೊಂಡಿದ್ದರೆ ಅಥವಾ ಅವನೊಡನೆ ಪಲಾಯನಗೈದಿದ್ದರೆ ಅಂಥವಳನ್ನು ಕುಲಗೆಟ್ಟ ಹೆಣ್ಣು ಎಂದು ತೀರ್ಪನ್ನು ವಿಧಿಸಿ ಅವಳನ್ನು ಸಂಪೂರ್ಣವಾಗಿ ಜೀವಮಾನದುದ್ದಕ್ಕೂ ಹಟ್ಟಿಯಿಂದ ಹೊರಗೆ ಇಡುವುದನ್ನು ಇಂದಿಗೂ ಸಹ ಮೊಳಕಾಲ್ಮೂರು ತಾಲ್ಲೂಕಿನ ಪ್ರದೇಶದಲ್ಲಿ ಕಾಣಬಹುದಾಗಿದೆ.

ಪರಸ್ಪರ ಒಂದೇ ಹಟ್ಟಿಯಲ್ಲಿರುವ ಹೆಣ್ಣು ಗಂಡುಗಳಿಬ್ಬರೂ ಪರಸ್ಪರ ಮೋಹಿಸಿ, ವಿವಾಹವಾಗಿದ್ದರೆ ಅವರನ್ನು ಪುನಃ ಹಟ್ಟಿಗೆ ಕರೆತಂದು ಅವರಿಗೆ ವಿಧಿವತ್ತಾಗಿ ವಿವಾಹವನ್ನು ಮಾಡುವ ಸಂಪ್ರದಾಯವಿದೆ.

ಕಾಡುಗೊಲ್ಲರಲ್ಲಿ ವಿಧವೆಯಾದ ಹೆಂಗಸು ಬೇರೆ ಜಾತಿಯ ಪರ ಪುರುಷನೊಡನೆ ಅಕ್ರಮ ಸಂಬಂಧವನ್ನು ಇಟ್ಟುಕೊಂಡಿದ್ದರೆ ಅವಳನ್ನು ಹಟ್ಟಿಯಿಂದ ಅಷ್ಟೇ ಅಲ್ಲ ಕಟ್ಟೆಮನೆಯಿಂದಲೂ ಸಂಪೂರ್ಣವಾಗಿ ಉಚ್ಚಾಟನೆ ಮಾಡುವರು. ಆದರೆ ಅದೇ ಕಾಡುಗೊಲ್ಲ ಸಮುದಾಯದ ವ್ಯಕ್ತಿ ಏನಾದರೂ ಬೇರೆ ಜಾತಿಯ ಮಹಿಳೆಯೊಡನೆ ಅಕ್ರಮ ಸಂಬಂಧವನ್ನು ಹೊಂದಿದ್ದರೆ ಇಲ್ಲಿ ಮಹಿಳೆಯನ್ನು ಹಟ್ಟಿಯಿಂದ ಹೊರಗೆ ಹಾಕಿದ ಹಾಗೆ ಅಂದರೆ ಉಚ್ಚಾಟನೆಯನ್ನು ಮಾಡದೆ ಅವನನ್ನು ಪರಿಶುಭ್ರನನ್ನಾಗಿಸಿ ಹಟ್ಟಿಯ ಒಳಗೆ ಕರೆದುಕೊಳ್ಳುವುದು ಎಷ್ಟರ ಮಟ್ಟಿಗೆ ನ್ಯಾಯ ಎಂಬುದನ್ನು ನೋಡಿದಾಗ ಇಲ್ಲಿ ಈ ಸಮುದಾಯದ ಪುರುಷ ಪ್ರಧಾನತೆಯು ಮಹಿಳೆಯನ್ನು ಯಾವ ರೀತಿಯಾಗಿ ನಡೆಸಿಕೊಳ್ಳುತ್ತಿದ್ದಾರೆ ಎಂಬುದು ಗೊತ್ತಾಗುತ್ತದೆ.

ಕನ್ಯೆಯೊಬ್ಬಳು ವಿವಾಹಿತನಾದ ಒಬ್ಬ ವ್ಯಕ್ತಿಯೊಡನೆ ಅಕ್ರಮ ಸಂಬಂಧ ಇಟ್ಟುಕೊಂಡಿದ್ದರೆ ಅವಳನ್ನು ಬಲವಂತವಾಗಿ ಅವನಿಗೆ ಕೊಟ್ಟು ಮದುವೆ ಮಾಡಿಸುತ್ತಾರೆ. ಈ ತಪ್ಪನ್ನು ಮಾಡಿದ ಗಂಡು ೨೪ ಹಣ ದಂಡ ಕೊಡಬೇಕಾಗುತ್ತಿತ್ತು ಹಾಗೆಯೇ ಕನ್ಯೆಯ ತಂದೆಯೂ ೨೪ ಹಣ ದಂಡ ಕೊಡಬೇಕಾಗುತ್ತದೆ. (ಕಾಡುಗೊಲ್ಲರ ಸಂಪ್ರದಾಯಗಳ ಮತ್ತು ನಂಬಿಕೆಗಳ ಡಾ. ತೀ. ನಂ. ಶಂಕರನಾರಾಯಣ ಪುಟ. ೧೬೫)

ಗೊಲ್ಲರ ಹಟ್ಟಿಯ ವಿಧವೆ ಬೇರೊಬ್ಬ ಪುರುಷನೊಂದಿಗೆ ಅನೈತಿಕ ಲೈಂಗಿಕ ಸಂಪರ್ಕ ಹೊಂದಿ ಗರ್ಭಿಣಿಯಾಗಿರುವುದು ಹಟ್ಟಿಯ ಹಿರಿಯನಿಗೆ ಗೊತ್ತಾದರೆ ಅವಳನ್ನು ಹಟ್ಟಿಯೊಳಗೆ ಕರೆದುಕೊಳ್ಳುವಾಗ ಹಟ್ಟಿಯ ಹಾದಿ ಪಕ್ಕ ನೆಲದಲ್ಲಿ ಮೂರು ಚಿಕ್ಕ ಚಿಕ್ಕ ಗುಂಡಿಗಳನ್ನು ತೆಗೆದು ಅವುಗಳಲ್ಲಿ ಹಾಲನ್ನು ಅಥವಾ ಅಂಬಲಿಯನ್ನೋ ಹಾಕಿ ಆ ಮಹಿಳೆಯನ್ನು ನಾಯಿಯಂತೆ ನಡೆಸಿಕೊಳ್ಳುತ್ತಾರೆ. ಅಂದರೆ ಕುರೇ ಕುರೇ... ಎಂದು ಕರೆದಾಗ ಅವಳು ಬಂದು ಗುಂಡಿಯಲ್ಲಿರುವ ಹಾಲನ್ನೋ ಅಥವಾ ಅಂಬಲಿಯನ್ನೋ ನೆಕ್ಕುತ್ತಿರುವಾಗ ಅಚ್ಚಾ, ಅಚ್ಚಾ... ಎಂದು

ಓಡಿಸಿದಂತೆ ಮಾಡಲಾಗುತ್ತದೆ. ಹೀಗೆ ಮೂರು ಸಲ ಮಾಡಿದ ನಂತರ ತಲೆ ಬೋಳಿಸಿ ಬೇವಿನಕಡ್ಡಿಯಿಂದ ನಾಲಿಗೆ ಸುಟ್ಟು, ದೇವರ ತೀರ್ಥ, ಧೂಳತ ಹಾಕಿ, ಹಟ್ಟಿಯಲ್ಲಿ ಸೇರಿಸಿಕೊಳ್ಳುತ್ತಿದ್ದರು. ಒಂದು ವೇಳೆ ಅವಳೇನಾದರೂ ಗಂಭೀರವಾದ ಅಪರಾಧವನ್ನು ಎಸಗಿದ್ದರೆ ಶಾಶ್ವತವಾಗಿ ಹಟ್ಟಿಯಿಂದ ಹೊರಗೆ ಇರಬೇಕಾಗುತ್ತಿತ್ತು.

ಈ ರೀತಿಯಾಗಿ ಅಪರಾಧವನ್ನು ಎಸಗಿದವರಿಗೆ ಹಿಂದಿನಕಾಲದಲ್ಲಿ ತಲೆಬೋಳಿಸುವ ಗಡ್ಡೆ ಮಂಡೆಯ ಶಾಸ್ತ್ರವನ್ನು ಕಟ್ಟುನಿಟ್ಟಾಗಿ ಆಚರಿಸುತ್ತಿದ್ದರಿಂದ ಇಂತಹ ಶಿಕ್ಷೆಗೆ ಹೆದರಿ ಈ ಸಮುದಾಯದಲ್ಲಿ ತಪ್ಪನ್ನು ಮಾಡುವಂತಹವರ ಸಂಖ್ಯೆ ಅತಿ ವಿರಳವಾಗಿತ್ತು. ಆದರೆ ಇಂದು ಈ ರೀತಿಯ ಗಡ್ಡೆಮಂಡೆಶಾಸ್ತ್ರ ಸಂಪೂರ್ಣವಾಗಿ ಹೋಗಿ ಈಗ ಕೇವಲ ತಪ್ಪಿಗೆ ದಂಡ ವಿಧಿಸುವುದು ಮಾತ್ರ ಉಳಿದುಕೊಂಡು ಬಂದಿದೆ. ಕ್ರಮೇಣ ಕಾಲಾಂತರದಲ್ಲಿ ಈ ರೀತಿಯ ದಂಡಕಟ್ಟುವ ಪದ್ಧತಿಯೂ ಸಹ ಕಣ್ಮರೆಯಾಗುವುದರಲ್ಲಿ ಸಂಶಯವಿಲ್ಲವೆಂದೇ ಹೇಳಬಹುದು.

ಈ ರೀತಿಯಾಗಿ ಕಾಡುಗೊಲ್ಲರಲ್ಲಿ ನ್ಯಾಯ ಪದ್ಧತಿಯು ಅತ್ಯಂತ ಬಿಗಿಯಿಂದ ಕೂಡಿರುವಂತದ್ದಾಗಿದೆ. ಆದರೆ ಇಂದಿನ ಆಧುನೀಕರಣದ ಪ್ರಭಾವದಿಂದ ಈ ಕಾಡುಗೊಲ್ಲರ ಹಟ್ಟಿಗಳ ಮೇಲೆಯೂ ಸಹ ಪ್ರಭಾವವನ್ನು ಬೀರಿರುವುದರಿಂದ ಮೊದಲಲ್ಲಿ ಇದ್ದಂತಹ ಐಕ್ಯತೆ ಮತ್ತು ಒಗ್ಗಟ್ಟು ಕನಸಿನ ಗಂಟಾಗಿ ಉಳಿದಿದೆ. ಆದರೆ ಈ ರೀತಿಯ ಐಕ್ಯತೆ ಮತ್ತು ಒಗ್ಗಟ್ಟುಗಳನ್ನು ಇಂದಿಗೂ ಮೊಳಕಾಲ್ಮೂರು ತಾಲ್ಲೂಕಿನ ಹೊಸಹಳ್ಳಿ ಗ್ರಾಮದಲ್ಲಿ ಕಾಣಬಹುದಾಗಿದೆ.

### ೪.೨ ಆರ್ಥಿಕ ನೆಲೆ

ಆಸರೆಗಾಗಿ, ಪ್ರೀತಿಗಾಗಿ, ನೆಮ್ಮದಿಗಾಗಿ ಮಹಿಳೆ ತನ್ನ ಜೀವಮಾನದುದ್ದಕ್ಕೂ ಪುರುಷನನ್ನೇ ಅವಲಂಬಿಸಬೇಕಾದ ಎಲ್ಲೆಡೆಗೂ ಇರುವಂತೆ ಕಾಡುಗೊಲ್ಲರ ಸಮುದಾಯದಲ್ಲಿಯೂ ಇದೆ. ಚಿಕ್ಕಂದಿನಲ್ಲಿ ಅಪ್ಪನಿಗೆ ಮಗಳಾಗಿ, ತಾಯಿಗೆ ನೆರಳಾಗಿ, ಅನಂತರ ಹದಿವಯಸ್ಸಿನಲ್ಲಿ ಗಂಡನಿಗೆ ಹೆಂಡತಿಯಾಗಿ ಆಟದ ಚೆಂಡಾಗಿ, ಅತ್ತೆ, ಮಾವರಿಗೆ ಸೊಸೆಯಾಗಿ ಗಾಣದ ಎತ್ತಿನಂತಾದಳು. ಆ ಮೇಲೆ ಮಗನಿಗೆ ತಾಯಿಯಾಗಿ ಊರುಗೋಲು ಆಗುವಳು. ಈ ರೀತಿಯಾಗಿ ಹೆಣ್ಣು ಚಿಕ್ಕಂದಿನಲ್ಲಿ ತಂದೆತಾಯಿಯಯ ಬಂಧನದಲ್ಲಿ ಹದಿಹರೆಯದಲ್ಲಿ ಗಂಡನ ಭದ್ರತೆಯಲ್ಲಿ ಮುಪ್ಪಿನಲ್ಲಿ ಮಕ್ಕಳ ಬಂಧನ ಹೀಗೆ ಮಹಿಳೆ ನಿರಂತರವಾಗಿ ತನ್ನ ಜೀವಮಾನದುದ್ದಕ್ಕೂ ಶೋಷಣೆಗೆ ಒಳಗಾಗುವಳು. ಅಂದರೆ ಹೆಣ್ಣು ಗಂಡಿನ ಅವಲಂಬಿತಳಾಗುವುದರಿಂದ ಆಕೆ ಇತರರ ಆಶ್ರಯದಲ್ಲಿ ಆಸರೆ ಪಡೆಯುವಂತೆ ಪುರುಷ ಪ್ರಧಾನ ಸಮಾಜ ಹೆಣ್ಣನ್ನು ಸ್ವಾಲಂಬಿಯನ್ನಾಗಿಸಿಲ್ಲ.

ಪಿತೃಪ್ರಧಾನ ವ್ಯವಸ್ಥೆಯು ಹೆಣ್ಣಿನಲ್ಲಿ ತ್ಯಾಗ, ಸಹನೆ, ಅರ್ಪಣೆ ಮುಂತಾದ ಗುಣಗಳನ್ನು ನಿರೀಕ್ಷಿಸುತ್ತದೆ. ಇಂಥಾ ಮೌಲ್ಯಗಳನ್ನು ಒಪ್ಪಿ ಜೀವನ ಸಾಗಿಸುವ ಹೆಣ್ಣು ಮಾತ್ರ ಸಮಾಜದಲ್ಲಿ ಮಾನ್ಯಳಾಗುವಳು. ವೀರತ್ವ ಪುರುಷನ ಗುಣವೆಂದು ಸಮಾಜ ನಿರೀಕ್ಷಿಸುವಂತೆ ಪಾಲನೆ, ಪೋಷಣೆ, ರಕ್ಷಣೆ ಮಾಡುವುದು ಹೆಣ್ಣಿನ ಕೆಲಸವೆಂದು ತೀರ್ಮಾನಿಸುತ್ತದೆ.

ಅನಾದಿ ಕಾಲದಿಂದಲೂ ಮಹಿಳೆ ಮನೆಯ ಕೆಲಸಗಳನ್ನು ಮಾಡುತ್ತಾ ಬಂದಿದ್ದಾಳೆ. ಮತ್ತು ಮಾಡುತ್ತಲೂ ಇದ್ದಾಳೆ. ಆಕೆ ಎಷ್ಟೇ ಕೆಲಸ ಮಾಡಿದರೂ ಅದು ಪುರುಷನ ಕೆಲಸಕ್ಕೆ ಪೂರಕವಾದುದಾಗಿದೆ. ಮನೆಯಲ್ಲಿ ಮಕ್ಕಳ ಲಾಲನೆ, ಪೋಷಣೆ ಅಡುಗೆ, ಕಸಮುಸುರೆ, ಬಟ್ಟೆ ಒಗೆಯುವುದು ಹೀಗೆ ಹಲವು ಕೆಲಸಗಳಲ್ಲಿ ಆಕೆ ತೊಡಗಿದ್ದರೂ ಅವಳ ವ್ಯಕ್ತಿತ್ವದ ವಿಕಾಸವೇನೂ ಆಗಿಲ್ಲದಿರುವುದನ್ನು ಪರಂಪರೆಯಲ್ಲಿ ಕಾಣುತ್ತೇವೆ. ಆಕೆ ಮನೆಕೆಲಸಗಳು ಮಾತ್ರವಲ್ಲದೆ ಪುರುಷನ ದುಡಿಮೆಯಲ್ಲಿ ಸಹಾಯಕಳಾಗಿ ಭಾಗವಹಿಸುತ್ತಿದ್ದಳು. ಬೇಟೆ, ಪಶುಪಾಲನೆ, ಕುರಿಕಾಯುವುದು, ವ್ಯವಸಾಯ, ಕೂಲಿ, ಹೀಗೆ ಹತ್ತು ಹಲವು ವೃತ್ತಿಗಳಲ್ಲಿ ಪುರುಷನ ಸರಿಸಮನಾಗಿಯೇ ದುಡಿಯುತ್ತಾ ಬಂದಿದ್ದಾಳೆ. ಇಂತಹ ವೃತ್ತಿಗಳಲ್ಲಿ ಬಂದ ಆದಾಯ ನೇರವಾಗಿ ಪುರುಷನ ಕೈಸೇರುತ್ತಿತ್ತು. ಅದರ ಮೇಲೆ ಆತನ ಒಡೆತನವೇ ಅಧಿಕ. ಈ ಕೆಲಸಗಳಿಂದ ಆಕೆಗೆ ಹೆಚ್ಚಿನ ಪ್ರತಿಫಲವಾಗಲಿ, ದುಡಿಮೆಯಿಂದ ಗೌರವವಾಗಲೀ ಇರಲಿಲ್ಲ. ಅವಳಿಗೆ ಏನಾದರೂ ಹಣದ ಅಗತ್ಯ ಬಿದ್ದಾಗ ಆಕೆ ಪುರುಷನ ಮುಂದೆ ಕೈಚಾಚಬೇಕಾದ ಸ್ಥಿತಿ ಇಂದಿಗೂ ಇದೆ. ದಿನ ನಿತ್ಯದ ಬದುಕಿನಲ್ಲಿ ಆರ್ಥಿಕ ಅವಲಂಬನೆ ಅವಳಿಗೆ ಅನಿವಾರ್ಯವಾಗಿದೆ. ಇಷ್ಟಲ್ಲದೆ

ಈ ಸಮುದಾಯದ ಮಹಿಳೆ ಮಾಡುವ ಕೆಲಸಗಳನ್ನು ಸಮುದಾಯವಷ್ಟೇ ಅಲ್ಲ ಸಮಾಜವೂ ಸಹ ಬಹಳಷ್ಟು ಕನಿಷ್ಟವಾಗಿ ಕಾಣುತ್ತಿದೆ.

ಈ ರೀತಿಯಾಗಿ ಮಹಿಳೆಯನ್ನು ಆರ್ಥಿಕವಾಗಿ ಸ್ವಾವಲಂಬನೆಯನ್ನು ಸಾಧಿಸದೇ ಇರುವುದಕ್ಕೆ ಪ್ರಮುಖ ಕಾರಣವೆಂದರೆ ಆ ಸಮುದಾಯದಲ್ಲಿನ ಮೌಢ್ಯ, ಸಂಪ್ರದಾಯಗಳು, ಮೂಢನಂಬಿಕೆಗಳು. ಇವೇ ಇವಳನ್ನು ಬಂಧಿಸಲ್ಪಟ್ಟಿವೆ. ಇಂದಿನ ದಿನಗಳಲ್ಲಿ ಮಹಿಳೆ ಮೇಲುನೋಟಕ್ಕೆ ಸಾಂಪ್ರದಾಯಿಕ ದುಡಿಮೆಯಿಂದ ಬಿಡಿಸಿಕೊಂಡಿದ್ದಾಳೆ ಎಂದೆನ್ನಿಸಬಹುದು. ಆದರೆ ಹಳೆಯ ರೀತಿಯ ಪ್ರತೀಕಗಳೇ ಹೊಸ ರೀತಿಯ ಉದ್ಯೋಗದಲ್ಲಿ ಪುನರಾವರ್ತನೆಗೊಂಡಿರುವುದನ್ನು ಮಹಿಳೆ ಗುರುತಿಸಿಕೊಳ್ಳಬೇಕಾದ ಸಂದರ್ಭ ಇಂದು ಒದಗಿ ಬಂದಿದೆ. ಹೆಣ್ಣಿನ ಪ್ರತೀಕ ಬದಲಾವಣೆಗೆ ಹಣವೊಂದೇ ಮುಖ್ಯವೆಂದು ಹೇಳುವಂತಿಲ್ಲ. ಸಮಾಜವೂ ಸಹ ತನ್ನ ಆಲೋಚನಾಕ್ರಮವನ್ನು ಬದಲಿಸಿಕೊಳ್ಳಬೇಕಾಗಿದೆ. ಇಂತಹ ಬದಲಾವಣೆಗೆ ಆಕೆ ತಾನು ಆಯ್ಕೆ ಮಾಡಿಕೊಳ್ಳುವ ಕ್ಷೇತ್ರದಲ್ಲಿ ಶ್ರಮವಹಿಸಿ ದುಡಿಯಬೇಕಾಗಿದೆ. ಸರಳವಾಗಿ ಸಿಗುವ ಅವಕಾಶಗಳಲ್ಲೇ ಆಕೆ ಉಳಿದುಬಿಡುವುದರಿಂದ ಅವಳ ವ್ಯಕ್ತಿತ್ವವಾಗಲಿ ಪ್ರತೀಕವಾಗಲಿ ಪುನರ್‌ಸೃಷ್ಟಿಯಾಗುವುದಿಲ್ಲ.

ಮಹಿಳೆ ಹಲವು ಕ್ಷೇತ್ರಗಳಲ್ಲಿ ಕಾಣಿಸಿಕೊಳ್ಳುತ್ತಿದ್ದಾಳೆ. ನಿಜ, ಆದರೆ ಉತ್ಪಾದನೆ ಮತ್ತು ಉನ್ನತ ಬೌದ್ಧಿಕ ಕ್ಷೇತ್ರಗಳ ಪುರುಷನ ಹಿಡಿತದಲ್ಲಿಯೇ ಉಳಿದು ಆಕೆ ಆತನ ಪೂರಕ ಕೆಲಸಗಾರ್ತಿ ಆಗಿದ್ದಾಳೆ. ಹಗಲು ರಾತ್ರಿಯೆನ್ನದೆ ದುಡಿಯುವ ಮಹಿಳೆಗೆ ಮನೆಯ ಉಳಿದ ಜನರು ಸಹಾಯ ಮಾಡಬೇಕೆಂದೇನೂ ಯೋಚಿಸುವುದಿಲ್ಲ. ಒಂದು ಕಡೆ ಗೃಹಿಣಿಯ ಕೆಲಸ ಮತ್ತೊಂದು ಕಡೆಗೆ ವೃತ್ತಿ. ಈ ಎರಡರ ಸಮತೋಲನವನ್ನು ಕಾಪಾಡಿಕೊಳ್ಳುವುದು ಕಷ್ಟಕರ.





**ಪಶುಪಾಲನೆ**

ಹೆಸರೇ ಸೂಚಿಸುವಂತೆ ಗೊಲ್ಲ ಜನಾಂಗದ ಸಾಂಪ್ರದಾಯಿಕ ಕಸುಬು ಪಶುಪಾಲನೆಯಾಗಿದೆ. ಇದರಲ್ಲಿ ಮಹಿಳೆಯ ಪಾತ್ರ ಅತ್ಯಂತ ಗಣನೀಯವಾಗಿದೆ. ಗಂಡಸಿನಷ್ಟೇ ಸರಿಸಮಾನವಾಗಿ ಈಕೆ ಪಶುಪಾಲನೆಯಲ್ಲಿ ತೊಡಗಿದ್ದಾಳೆ. ದನ ಕರುಗಳನ್ನು ಸಾಕಿ ಅವುಗಳ ಹಾಲು, ಮೊಸರು, ತುಪ್ಪವನ್ನು ಮಾರಿ ದಿನಿತ್ಯದ ಅವಶ್ಯಕ ವಸ್ತುಗಳನ್ನು ತಂದು ಕುಟುಂಬ ನಿರ್ವಹಣೆ ಮಾಡುವಲ್ಲಿ ಪ್ರಮುಖವಾಗಿದ್ದಾಳೆ. ಆದರೆ ಇಂದು ಅತಿ ಹೆಚ್ಚಿನ ಜನಸಂಖ್ಯೆಯಿಂದಾಗಿ ಕಾಡುಗಳು ಕ್ರಮೇಣ ನಾಶವಾಗುವುದರ ಜೊತೆಯಲ್ಲಿಯೇ ದನಕರುಗಳ ಸಂಖ್ಯೆಯೂ ಸಹ ಇಳಿಮುಖವಾಗಿದೆ. ಆದರೂ ಸಹ ಈ ಜನಾಂಗದ ಮಹಿಳೆಯು ತನಗರಿವಿಲ್ಲದಂತೆಯೇ ವಂಶಪರಂಪರೆಯಾಗಿ ಬಂದಿರುವ ಈ ಪಶುಪಾಲನೆ ವೃತ್ತಿಯ ಕುರುಹಾಗಿ ಒಂದೆರೆಡು ಹಸು, ಎಮ್ಮೆಗಳನ್ನು ಸಾಕಿ ಅದರಿಂದ ಬಂದ ಹಾಲು, ಮೊಸರು, ಬೆಣ್ಣೆ, ತುಪ್ಪಗಳನ್ನು ಮಾರುವ ಸಂಪ್ರದಾಯವಿದೆ. ಹೀಗೆ ಮಾರುವುದರಿಂದ ಬಂದ ಹಣವು ಇಲ್ಲಿ ಮಹಿಳೆಯ ಕೈಯಲ್ಲಿ ಉಳಿಯದೆ ಗಂಡಿನ ಜೇಬನ್ನು ಸೇರುವುದರಿಂದ ಇಲ್ಲಿ ಮಹಿಳೆ ಆರ್ಥಿಕವಾಗಿ ಸಬಲಳಾಗದೆ ಇದ್ದಾಳೆ.

**ಕುರಿಸಾಕಾಣಿಕೆ**

ನಮ್ಮ ಗೊಲ್ಲ ಸಮುದಾಯದವರು ಪಶುಪಾಲನೆಯ ಜೊತೆ ಜೊತೆಯಲ್ಲಿಯೇ ಈ ಕುರಿ ಸಾಕಾಣಿಕೆಯನ್ನು ಮೈಗೂಡಿಸಿಕೊಂಡಿದ್ದರು. ಮೊಳಕಾಲ್ಮೂರು ತಾಲ್ಲೂಕಿನ ಪ್ರದೇಶದ ಬಹುತೇಕ ಕಾಡುಗೊಲ್ಲ ಮಹಿಳೆಯರು ಮದುವೆಗಿಂತ ಮುಂಚೆ ಮತ್ತು ಮದುವೆಯ ನಂತರ ಇಂದಿಗೂ ಸಹ ಕರಿಸಾಕಾಣಿಕೆಯಲ್ಲಿ ತೊಡಗಿರುವುದನ್ನು ನಾವು ಚಿಕ್ಕೇರಹಳ್ಳಿ, ಗೊಲ್ಲರಹಟ್ಟಿಯಲ್ಲಿ ಕಾಣಬಹುದಾಗಿದೆ. ಈ ಕುರಿಗಳ ಸಾಕಾಣಿಕೆಯಿಂದ ಹಾಲನ್ನು ಕರೆದು ಹೋಟೆಲುಗಳಿಗೆ ಮಾರಾಟಮಾಡುವುದು, ಇದೇ ರೀತಿ ಮೊಸರು, ತುಪ್ಪವನ್ನೂ ಸಹ ನಗರಪ್ರದೇಶ ಇಲ್ಲವೇ ಗ್ರಾಮೀಣವಾಗಿ ತಮ್ಮ ಸ್ಥಳೀಯ ಪ್ರದೇಶಗಳಲ್ಲಿಯೇ ಮಾರಾಟಮಾಡುವಳು. ಇದರಿಂದ ಬಂದ ಹಣವನ್ನು ಮನೆಯ ಖರ್ಚಿಗೆ ನಿಭಾಯಿಸುವಳು. ಹೀಗೆ ಈ ಮಹಿಳೆ ಹಗಲು-ರಾತ್ರಿಯೆನ್ನದೆ ದುಡಿಮೆಯನ್ನು ಕೈಗೊಂಡರೂ ಸಹ ಅವಳಿಗೆ ಯಾವುದೇ ರೀತಿಯ ಪ್ರತಿಫಲವಿಲ್ಲವಾಗಿದೆ. ಸಾಮಾನ್ಯವಾಗಿ ಈ ಗೊಲ್ಲ ಜನಾಂಗದಲ್ಲಿ ಶ್ರೀಮಂತಿಕೆ ನಿರ್ಧಾರವಾಗುವುದು ಅವರು ಎಷ್ಟು ಕುರಿಗಳನ್ನು ಸಾಕುತ್ತಾರೆ ಅಥವಾ ಹೊಂದಿದ್ದಾರೆ ಎಂಬುದಾಗಿದೆ. ಏಕೆಂದರೆ

ಈ ಕುರಿಗಳು ಚಲಿಸುವ (ಓಡಾಡುವ) ಬ್ಯಾಂಕುಗಳಾಗಿವೆ. ಇತ್ತೀಚಿಗೆ ಕಾಡುಗಳು, ಗೋಮಾಳಗಳು ನಾಶ ಮತ್ತು ಕೃಷಿ ಚಟುವಟಿಕೆಗಳಿಂದಾಗಿ ಕ್ರಮೇಣ ಕುರಿಸಾಕಾಣಿಕೆಯು ಕಡಿಮೆಯಾಗಿದೆ. ಜೊತೆಗೆ ಕೈಗಾರೀಕರಣ, ನಗರೀಕರಣ ಮತ್ತು ಆಧುನೀಕರಣದ ಪ್ರಭಾವ ಈ ಗೊಲ್ಲರ ಹಟ್ಟಿಯ ಯುವಕ ಯುವತಿಯರ ಮೇಲೆ ಪ್ರಭಾವ ಬೀರಿರುವುದರಿಂದಾಗಿ ಕುರಿಕಾಯುವುದು ಕಷ್ಟದ ಕೆಲಸ ಮತ್ತು ಕಳಂಕಿತ ಕೆಲಸವಲ್ಲದಿದ್ದರೂ ಪ್ರತಿಷ್ಠೆಯ ದೃಷ್ಟಿಯಿಂದ ಕೆಳಮಟ್ಟದ ಉದ್ಯೋಗವಾದ್ದರಿಂದ ಸಮಾಜದ ಸ್ಥರದಲ್ಲಿ ಉನ್ನತ ಸ್ಥಾನಪಡೆಯಲು ಹಪಹಪಿಸುತ್ತಿರುವುದರಿಂದ ಕುರಿಸಾಕಾಣಿಕೆ ಮತ್ತು ಪಶುಪಾಲನೆ ಈ ಪ್ರದೇಶದಲ್ಲಿ ಬಹಳಷ್ಟು ಕ್ಷೀಣಿಸುತ್ತಿದೆ.

**ವ್ಯವಸಾಯ**

ಗೊಲ್ಲರಿಗೆ ಪಶುಪಾಲನೆಯೇ ಮುಖ್ಯ ಕಸುಬಾಗಿದೆ. ಆದರೆ ಅರಣ್ಯನಾಶ, ಗೋಮಾಳಗಳು ಇಲ್ಲದಿರುವುದರಿಂದ ಉಪಜೀವನಕ್ಕಾಗಿ ಕೃಷಿಯ ಕಡೆಗೆ ಹೊರಳುವ ಅವಶ್ಯಕತೆ ಏರ್ಪಟ್ಟಿತು. ಕೃಷಿಯನ್ನು ಅವಲಂಬಿಸಿರುವ ಈ ಮೊಳಕಾಲ್ಮೂರು ತಾಲ್ಲೂಕಿನ ಪ್ರದೇಶದಲ್ಲಿ ಇರುವ ಕೃಷಿಕ ಗೊಲ್ಲರಿಗೆ ಇರುವ ಜಮೀನು ಕೇವಲ ಅತ್ಯಲ್ಪವಾಗಿದೆಯೆಂದೇ ಹೇಳಬಹುದು. ಅತಿ ಕಡಿಮೆ ಜಮೀನೆಂದರೆ ಅರ್ಧ ಎಕರೆ ಅತಿ ಹೆಚ್ಚೆಂದರೆ ಐದೆಕರೆಯಷ್ಟಿರುವ ಜಮೀನು ಹೊಂದಿರುವ ಇವರಿಗೆ ಜೀವನ ಸಾಗಿಸಲು ಇದು ಯಾತಕ್ಕೂ ಬಾರದಾಗಿದೆ. ಅದೂ ಅಲ್ಲದೆ ಇವು ನೀರಾವರಿ ಜಮೀನುಗಳಾಗಿರದೆ ಮಳೆಯಾಶ್ರಯಿತ ಜಮೀನುಗಳಾಗಿವೆ. ಶೇಂಗಾ, ಸೂರ್ಯಕಾಂತಿ, ಸಜ್ಜೆ, ನವಣೆ, ರಾಗಿ, ಜೋಳಗಳನ್ನು ಬೆಳೆಯುವರು. ಇಂತಹವೇ ಬೆಳೆದು ವರ್ಷದುದ್ದಕ್ಕೂ ತಮ್ಮ ತುತ್ತಿನ ಚೀಲವನ್ನು ತುಂಬಿಸಿಕೊಳ್ಳುವರು.

ಈ ಸಮುದಾಯದಲ್ಲಿ ಮಹಿಳೆ ಬಿತ್ತನೆಯ ಸಂದರ್ಭದಲ್ಲಿ ಮಧ್ಯರಾತ್ರಿಯೇ ಎದ್ದು ಅಡಿಗೆಮಾಡಿಕೊಂಡು ಹೊಲಕ್ಕೆ ಹೋಗಿ ಸಾಯಂಕಾಲದವರೆಗೂ ಬಿತ್ತನೆ, ಕಳೆಕೀಳುವುದು ಮುಂತಾದ ಕೃಷಿ ಚಟುವಟಿಕೆಗಳಲ್ಲಿ ತೊಡಗಿರುತ್ತಾಳೆ. ಇಷ್ಟಾದರೂ ಬಿಡಿಗಾಸೂ ಇವಳ ಕೈಸೇರದೆ ಎಲ್ಲವೂ ಗಂಡನ ಕೈಯೊಳಗೆ ಸೇರುವುದು. ಇಷ್ಟೇ ಅಲ್ಲದೆ, ತಾನು ಪ್ರತಿನಿತ್ಯ ಮಾಡುವ ಮನೆಯ ಕೆಲಸ ಕಾರ್ಯಗಳಿಗೂ ಯಾವುದೇ ರೀತಿಯ ಪ್ರತಿಫಲಾಕ್ಷೆಯಿಲ್ಲದೆ ದುಡಿಯಬೇಕಾಗುತ್ತದೆ. ಬಿಡಿಗಾಸಿಗಾಗಿ ಗಂಡನ ಮುಂದೆ ಕೈಚಾಚಿ ನಿಲ್ಲಬೇಕಾದ ಪರಿಸ್ಥಿತಿ ಇದೆ. ಆದರೂ ಇದು ಪುರುಷ ಪ್ರಧಾನ ಸಮಾಜವಾದ್ದರಿಂದ ಕರಾರುವಕ್ಕಾಗಿ ಇವಳು ತನ್ನ ಅವಶ್ಯಕತೆಗಳಿಗಾಗಿ ಗಂಡನಿಂದ ಹಣ ಪಡೆಯುವಳು ಎಂದು ಹೇಳಲಾಗದು. ಆದರೆ ಇಂದು ವರುಣನ ಅವಕೃಪೆಯಿಂದಾಗಿ ಕೇವಲ ಕೃಷಿಯನ್ನೇ ಅವಲಂಬಿಸಿದ ಇವರು ಇಂದು ತಮ್ಮ ಮೂಲಕುಲಕಸುಬುಗಳನ್ನು ಬಿಟ್ಟು ನಗರ ಪ್ರದೇಶಗಳಿಗೆ ವಲಸೆ ಹೋಗಿ ಕೂಲಿ ಕೆಲಸ ಮಾಡಲು ತೊಡಗಿದ್ದಾರೆ.

ಇರುವ ತಮ್ಮ ತುಂಡು ಭೂಹಿಡುವಳಿಗಳಲ್ಲಿ ಬೆಳೆಯು ಬರಲಾರದಂತ ಸಂದರ್ಭದಲ್ಲಿ ಅವರ ಜೀವನ ನಿರ್ವಹಣೆ ಬಹಳ ಕಷ್ಟಕರವಾಗಿದೆ. ಇವರಲ್ಲಿ ಕೃಷಿಕಾರ್ಮಿಕರ ಸ್ಥಿತಿಗತಿ ತುಂಬಾ ನಿಕೃಷ್ಟವಾಗಿದೆ. ಇತ್ತೀಚಿಗೆ ಕೃಷಿ ಚಟುವಟಿಕೆಗಳಿಗೆ ಆಧುನಿಕ ತಂತ್ರಜ್ಞಾನವನ್ನು ಅಳವಡಿಸಿರುವುದರಿಂದ ಇವರಿಗೆ ಕೃಷಿ ಜಮೀನಿನಲ್ಲಿ ಕೆಲಸ ಸಿಗದಂತಾಗಿ ಆರ್ಥಿಕವಾಗಿ ಹಿಂದುಳಿದಿದ್ದಾರೆ. ಇವರಲ್ಲಿ ಚಿಕ್ಕಮಕ್ಕಳಿನಿಂದ ಹಿಡಿದು ವಯಸ್ಕ ವ್ಯಕ್ತಿಗಳವರೆಗೂ ಪ್ರಬಲ ಜಾತಿಗಳ ಜಮೀನಿನಲ್ಲಿ ಮತ್ತು ಮನೆಗಳಲ್ಲಿ ಜೀತದಾಳುಗಳಾಗಿ ದುಡಿಯುತ್ತಿದ್ದಾರೆ. ಇನ್ನು ಇವರಲ್ಲಿ ಸಣ್ಣ, ಅತಿಸಣ್ಣ ರೈತರ ಸ್ಥಿತಿ ಹೇಳತೀರದು.

ಉಪಕುಲ ಕಸುಬು ಕುರಿಸಾಕಾಣಿಕೆ, ಪಶುಪಾಲನೆ, ಮತ್ತು ಕೃಷಿ ಜೊತೆಗೆ ಇವರು ಸಣ್ಣಪುಟ್ಟ ವ್ಯವಹಾರಗಳಲ್ಲಿ ತೊಡಗಿದ್ದಾರೆ. ಉದಾಹರಣೆಗೆ ವೆಂಕಟಾಪುರದ ಮಹಿಳೆಯರು ತರಕಾರಿ ಮಾರಾಟಮಾಡುವುದನ್ನು ಕಾಣಬಹುದಾಗಿದೆ. ಈ ಸಮುದಾಯದವರಿಗೆ ವ್ಯವಹಾರ ಜ್ಞಾನ ಇಲ್ಲದಿರುವುದಕ್ಕೆ ಇವರಲ್ಲಿಯ ಅನಕ್ಷರತೆಯೇ ಕಾರಣವೆನ್ನಬಹುದು. ಕೆಲವೊಂದು ಕಡೆಗಳಲ್ಲಿ ಮಾತ್ರ ವ್ಯವಹಾರ ಮಾಡುವುದನ್ನು ಕಾಣಬಹುದಾಗಿದೆ. ಇನ್ನು ಕೆಲವರು ಕುಲದ ಮೂಲಕಸುಬನ್ನೇ ಬಿಟ್ಟು ಕೆಲಸಕ್ಕಾಗಿ ನಗರಪ್ರದೇಶಗಳಿಗೆ ತೆರಳುತ್ತಿದ್ದಾರೆ.

ಒಟ್ಟಾರೆಯಾಗಿ ಗೊಲ್ಲಬುಡಕಟ್ಟು ಸಮುದಾಯವು ತನ್ನ ಪಾರಂಪರಿಕ ವೃತ್ತಿನೆಲೆಗಳನ್ನು ಕಳೆದುಕೊಂಡು ಕಂಗಾಲಾಗಿದೆ. ಕುಟುಂಬದ ಕೇಂದ್ರವಾದ ಸ್ತ್ರೀ ಕೂಡ ಈ ಎಲ್ಲಾ ತಲ್ಲಣಗಳಿಂದ ಹೊರಬರಲು ಸಾಧ್ಯವಾಗದೇ

ನರಳುತ್ತಿದ್ದಾಳೆ. ಕುಟುಂಬ ನಿರ್ವಹಣೆಗಾಗಿ ಪುರಷನೊಂದಿಗೆ ಸರಿಜೋಡಿಯಾಗಿ ನಗರ ಪ್ರದೇಶಗಳಲ್ಲಿ ಕಟ್ಟಡ ಕೆಲಸಗಳಿಗೆ ಸಹಾಯಕಳಾಗಿ, ಗಾರೆಯ ಕೆಲಸವನ್ನು ನಿರ್ವಹಿಸಿ ಅದರಿಂದ ಬರುವ ಆದಾಯದಿಂದ ತನ್ನ ಸಂಸಾರದ ಭಾರವಾದ ನೋಗವನ್ನು ಹಗುರಗೊಳಿಸಿಕೊಳ್ಳಲು ಹಗಲು ರಾತ್ರಿಯೆನ್ನದೆ ದುಡಿಯುತ್ತಿದ್ದಾಳೆ. ಮೊಳಕಾಲ್ಮೂರು ತಾಲ್ಲೂಕಿನ ಪ್ರದೇಶದ ಕಾಡುಗೊಲ್ಲರು ಈ ರೀತಿ ಗಾರೆ ಕೆಲಸಕ್ಕೆ ಹೋಗಿ ದುಡಿಮೆ ಮಾಡುವುದನ್ನು ಸಾಮಾನ್ಯವಾಗಿ ಕಾಣಬಹುದಾಗಿದೆ.

ಗಣಿಗಾರಿಕೆಯಲ್ಲಿ ಕೆಲಸಕ್ಕಾಗಿ ತನ್ನ ಇಡೀ ಕುಟುಂಬದೊಂದಿಗೆ ಮಹಿಳೆ ಪಕ್ಕದ ಸಂಡೂರು, ರಾಜಾಪುರ, ಹೊಸಪೇಟೆ ಕಡೆ ಗುಳೆ ಹೋಗುತ್ತಿದ್ದಾಳೆ. ಇದಕ್ಕೆ ಪ್ರಮುಖ ಕಾರಣ ಮಳೆಯ ಅಭಾವದಿಂದ ಉಂಟಾದ ಭೀಕರ ಬರಗಾಲವಾಗಿದೆ. ಇತ್ತೀಚಿಗೆ ಸುಮಾರು ಎರಡರಿಂದ ಮೂರು ವರ್ಷಗಳ ಕಾಲ ಮಳೆಯಿಲ್ಲದೆ, ಬೆಳೆ ಇಲ್ಲದಂತಾಗಿ ತುತ್ತು ಅನ್ನಕ್ಕಾಗಿ ಈ ರೀತಿ ಗುಳೇಹೋಗುತ್ತಿರುವುದರಿಂದ ತನ್ನ ಇಡೀ ಸಂಸರಾದ ಮಕ್ಕಳು ಅವಿದ್ಯಾವಂತರಾಗಿ ದುಸ್ತರ ಜೀವನವನ್ನು ಎದುರಿಸುತ್ತಿದ್ದಾರೆ.

ಕಾಡುಗೊಲ್ಲ ಸಮುದಾಯದ ಮಹಿಳೆ ಇಂದು ಆರ್ಥಿಕವಾಗಿ ಸಬಲಳಾಗುವುದಕ್ಕಾಗಿ ಸರ್ಕಾರೇತರ ಅನೇಕ ಸ್ವಯಂ ಸೇವಾ ಸಂಸ್ಥೆಗಳಿಂದ ಸ್ಥಾಪಿಸಲ್ಪಟ್ಟ ಸ್ವಸಹಾಯ ಗುಂಪುಗಳ, ಹಾಗೂ ಸ್ತ್ರೀಶಕ್ತಿ ಗುಂಪುಗಳ ಸಹಾಯದಿಂದ ತಮ್ಮ ಆರ್ಥಿಕ ಮಟ್ಟವನ್ನು ಸುಧಾರಿಸಿಕೊಳ್ಳುತ್ತಿದ್ದಾಳೆ. ಹಾಗೂ ತನ್ನ ಸ್ಥಾನಮಾನವನ್ನು ಉತ್ತಮ ಪಡಿಸಿಕೊಳ್ಳಲು ಸಹಾಯವಾಗುತ್ತದೆ. ತಮ್ಮ ಸಮುದಾಯದ ಸರ್ವಾಂಗೀಣ ಅಭಿವೃದ್ಧಿಗೆ ಪೂರಕವಾಗಿ ನಿಯಮಗಳನ್ನು ಕ್ರೋಢೀಕರಿಸಿಕೊಂಡು ತಮ್ಮತಮ್ಮಲ್ಲಿಯೇ ಸ್ವಸಹಾಯ ಕಲ್ಪಿಸಿಕೊಳ್ಳಲು ಗುಂಪುಗಳನ್ನು ಹತ್ತರಿಂದ ಇಪ್ಪತ್ತು ಮಹಿಳೇಯರು ಸೇರಿ ನಿಗಧಿತವಾಗಿ ಉಳಿತಾಯ ಮಾಡುವುದು ತಮ್ಮದೇ ಆದ ಸ್ವಂತ ತತ್ವಗಳ ಮೂಲಕ ಸಾಲ ನೀಡುವುದು ಸಾಮಾನ್ಯ ನಿಧಿಯನ್ನು ರೂಢಿಸುವುದು ಒಮ್ಮತ ತೀರ್ಮಾನದಿಂದಲೇ ಎಲ್ಲಾ ಸಮಸ್ಯೆಗಳನ್ನು ತಮ್ಮಲ್ಲಿಯೇ ಬಗೆಹರಿಸಿಕೊಂಡು ಆರ್ಥಿಕ ಮಟ್ಟವನ್ನು ಸುಧಾರಿಸಿಕೊಳ್ಳುತ್ತಿದ್ದಾರೆ.

### ೪. ೩. ಶೈಕ್ಷಣಿಕತೆ

ಶಿಕ್ಷಣವು ಒಂದು ಸಾಮಾಜಿಕ ಬದಲಾವಣೆಯ ಸಂಸ್ಥೆಯಾಗಿದೆ. ಸಾಮಾಜಿಕ ಚಲನೆಯ ವಾಹಕವಾಗಿದೆ. ಶಿಕ್ಷಣವು ವೃತ್ತಿಯ ಅಂತಸ್ತಿನ ನಿರ್ಧಾರಕ ಅಂಶವಾಗಿದೆ. ಒಂದು ದೇಶದ ಜನಾಂಗದ ಸರ್ವತೋಮುಖ ಅಭಿವೃದ್ಧಿಯು ಶಿಕ್ಷಣವನ್ನು ಅವಲಂಬಿಸಿದೆ. ಶಿಕ್ಷಣವಿಲ್ಲದ ವ್ಯಕ್ತಿ ವೈಯಕ್ತಿಕವಾಗಿಯೇ ಆಗಲಿ, ಸಾಮಾಜಿಕವಾಗಿಯೇ ಆಗಲಿ ಉನ್ನತಿಯಾಗಲು ಸಾಧ್ಯವಿಲ್ಲ. ವ್ಯಕ್ತಿಯ ಮತ್ತು ಸಮಾಜದ ಆರ್ಥಿಕ, ಸಾಮಾಜಿಕ ಮತ್ತು ರಾಜಕೀಯ ಹಿಂದುಳಿದಿರುವಿಕೆಗೆ ಶಿಕ್ಷಣದ ಕೊರತೆಯೇ ಪ್ರಮುಖ ಕಾರಣವಾಗುತ್ತಿದೆ.

ಆಧುನಿಕ ಬ್ರಿಟಿಷ್ ಔಪಚಾರಿಕ ಶಿಕ್ಷಣ ಜಾರಿಗೆ ಬಂದ ಮೇಲೆ ರಾಜ್ಯದ ಬೇರೆ ಬೇರೆ ಸಮುದಾಯದವರು ಅವರವರ ಆರ್ಥಿಕ ಮತ್ತು ಸಾಮಾಜಿಕ ಸ್ಥಿತಿಗತಿಗಳಿಗೆ ತಕ್ಕಂತೆ ಶಿಕ್ಷಣವನ್ನು ಪಡೆದು ಮುಂದುವರೆದರೆ ಈ ಕಾಡುಗೊಲ್ಲ ಸಮುದಾಯ ಮಾತ್ರ ಔಪಚಾರಿಕ ಶಿಕ್ಷಣವನ್ನು ಪಡೆಯದೆ ವಂಚಿತವಾಗಿದೆ. ಇದಕ್ಕೆ ಕಾರಣ ಈ ಸಮುದಾಯ ಗ್ರಾಮೀಣ ಭಾಗದಲ್ಲಿ ಅದರಲ್ಲಿಯೂ ಊರುಗಳಿಂದ ಸ್ವಲ್ಪ ದೂರದಲ್ಲಿ ವಾಸವಾಗಿರುವುದರಿಂದ ಬಹುತೇಕ ಜನರು ತಮ್ಮ ಮಕ್ಕಳನ್ನು ಶಾಲೆಗೆ ಕಳುಹಿಸಿದೆ ದನ, ಕುರಿಗಳನ್ನು ಕಾಯುವುದು, ವ್ಯವಸಾಯ ಮಾಡುವುದು ಹೇಗೆ ಎಂಬುದನ್ನು ತಮ್ಮ ಮಕ್ಕಳಿಗೆ ಅನೌಪಚಾರಿಕ ಶಿಕ್ಷಣದ ಮೂಲಕ ಕಲಿಸುತ್ತಿದ್ದರು. ಏಕೆ ನಿಮ್ಮ ಮಕ್ಕಳನ್ನು ಶಾಲೆಗೆ ಕಳುಹಿಸುತ್ತಿಲ್ಲಾ ಎಂದು ವಿಚಾರಿಸಿದರೆ ಶಾಲೆ ಕಲಿತು ಯಾರು ಉದ್ಧಾರವಾಗಿದ್ದಾರೆ ನಮ್ಮ ಅಪ್ಪ ಅಮ್ಮ ಓದಿದ್ದಿಲ್ಲಾ, ಅವರು ಜೀವನ ಮಾಡಲಿಲ್ವೆ, ಹಾಗೆಯೇ ನಾವು ಸಹ ವಿದ್ಯಾಭ್ಯಾಸ ಮಾಡಿಲ್ಲ. ಆದರೂ ನಾವು ಸಹ ಜೀವನ ನಡೆಸುತ್ತಿಲ್ಲವೇ ಹೀಗೆಯೇ ನಮ್ಮ ಮಕ್ಕಳೂ ಎಂಬ ಧೋರಣೆ ಇವರದು.

ಕರ್ನಾಟಕದಲ್ಲಿ ಪ್ರಮುಖವಾಗಿ ಗೊಲ್ಲರು ಬಹು ಸಂಖ್ಯೆಯಲ್ಲಿ ಕಂಡು ಬರುವ ಜಿಲ್ಲೆಗಳೆಂದರೆ ಚಿತ್ರದುರ್ಗ, ದಾವಣಗೆರೆ, ತುಮಕೂರು ಈ ಪ್ರದೇಶಗಳಲ್ಲಿ ಇಂದಿನವರೆಗೂ ನಗರ-ಗ್ರಾಮೀಣ ಜನರ ಸಮುದಾಯದಿಂದ ಪ್ರತ್ಯೇಕವಾಗಿ ಹಟ್ಟಿಗಳನ್ನು ಕಟ್ಟಿಕೊಂಡು ವಾಸವಾಗಿದ್ದಾರೆ. ಆದರೆ ಮೊಳಕಾಲ್ಮೂರು ತಾಲ್ಲೂಕಿನ ಪ್ರದೇಶದ ಕಾಡುಗೊಲ್ಲ ಸಮುದಾಯದವರು ಗ್ರಾಮೀಣ ಜನಸಮುದಾಯದ ಜೊತೆ ಬದುಕು ನಿರ್ವಹಿಸುತ್ತಿದ್ದರೂ ಈ

ಜನಾಂಗದ ಮಹಿಳೆಯ ಶಿಕ್ಷಣದ ಬಗ್ಗೆ ಮಾತನಾಡುವ ಹಾಗೆ ಇಲ್ಲ. ಏಕೆಂದರೆ ಇವರ ಹಟ್ಟಿಗಳಲ್ಲಿರುವ ಸಾಮಾಜಿಕ ಪರಿಸರವನ್ನು ನೋಡಿದರೆ ಶಾಲೆ ಮತ್ತು ಶಿಕ್ಷಣದ ಬಗ್ಗೆ ಯೋಚಿಸುವ ಮನಸ್ಸು ಬರುವುದಿಲ್ಲ. ಇನ್ನು ಇವರಲ್ಲಿ ಶಿಕ್ಷಣದ ಕಲಿಕೆಯ ಮಾತೆಲ್ಲಿ ಬರುತ್ತದೆ. ಬಹುತೇಕ ಈ ಗೊಲ್ಲರ ಹಟ್ಟಿಗಳು ನಾಗರಿಕ ಸೌಲಭ್ಯಗಳಿಂದ ವಂಚಿತವಾಗಿ ಕೊಳಗೇರಿಗಳಾಗಿವೆ. ಕುಡಿಯುವ ನೀರು, ವ್ಯವಸ್ಥಿತವಾದ ಚರಂಡಿಗಳಿಲ್ಲದಿರುವುದು, ನೈಸರ್ಗಿಕವಾಗಿ ಹಟ್ಟಿಗಳ ನೈರ್ಮಲ್ಯವನ್ನು ಕೆಡಿಸಿವೆ. ಇಂತಹ ಪರಿಸರದಲ್ಲಿ ಜನಿಸಿದ ಮಕ್ಕಳಿಗೆ ಶಿಕ್ಷಣ ಗಗನ ಕುಸುಮವಾಗಿದೆ. ಇವರಿಗೆ ಶಿಕ್ಷಣ ಕಲಿಯಲು ಮನಸ್ಸು ಬಾರದೆ, ಇವರಿಗೆ ಪ್ರೋತ್ಸಾಹ ಮತ್ತು ಸ್ಫೂರ್ತಿಯಾದರೂ ಹೇಗೆ ಬರುತ್ತದೆ.

ಮೊಳಕಾಲ್ಮೂರು ತಾಲ್ಲೂಕಿನ ಪ್ರದೇಶದಲ್ಲಿ ಕಾಡುಗೊಲ್ಲ ಮಹಿಳೆಯ ಬಗ್ಗೆ ಅಧ್ಯಯನವನ್ನು ಕೈಗೊಂಡ ಸಂದರ್ಭದಲ್ಲಿ ಈ ಜನಾಂಗದ ಮಕ್ಕಳ ಹಲವಾರು ಕಾರಣಗಳಿಂದ ಶಾಲೆಗಳನ್ನು ಬಿಟ್ಟಿರುವುದು ಮತ್ತು ಬಿಡುತ್ತಿರುವುದು ಈ ಅಧ್ಯಯನಕಾರನ ಗಮನಕ್ಕೆ ಬಂದಿತು. ಇದರಿಂದ ಇವರಲ್ಲಿ ಅನುತ್ತೀರ್ಣತೆ ಮತ್ತು ಅಪಮೌಲ್ಯ ಹೆಚ್ಚಾಗಿ ಕಂಡು ಬಂದಿತು. ಶೇಕಡ ೩೦ ರಷ್ಟು ಮಹಿಳೆಯರು ಪ್ರಾಥಮಿಕ ಹಂತದಲ್ಲಿ ವಿವಿಧ ಕಾರಣಗಳಿಗೆ ಶಾಲೆಗಳನ್ನು ಬಿಡುತ್ತಿದ್ದಾರೆ. ಹಿರಿಯ ಪ್ರಾಥಮಿಕ ಹಂತದಲ್ಲಿ ಶೇಕಡ ೩೦ ರಷ್ಟು ಶಾಲೆಯನ್ನು ಬಿಟ್ಟರೆ, ಇನ್ನು ಪ್ರೌಢಶಾಲೆಯ ಹಂತದಲ್ಲಿ ಶಾಲೆ ಬಿಡುವವರ ಪ್ರಮಾಣ ಇನ್ನೂ ಪ್ರೌಢ ಶಾಲೆ ಹಂತದಲ್ಲಿ ಶಾಲೆ ಬಿಡುವವರ ಪ್ರಮಾಣ ಇನ್ನೂ ಹೆಚ್ಚಿದೆ. ಅಂದರೆ ಶೇಕಡ ೪೫ ರಷ್ಟು ವಿದ್ಯಾರ್ಥಿನಿಯರು ಪ್ರೌಢ ಶಿಕ್ಷಣವನ್ನು ಮುಗಿಸದೆ ಅರ್ಧಕ್ಕೆ ಬಿಡುವುದು ಕಂಡು ಬಂದಿತು. ಈ ರೀತಿಯಾಗಿ ಮಕ್ಕಳ ಶಾಲೆಯನ್ನು ಅರ್ಧದಲ್ಲಿಯೇ ಬಿಡಲು ಕಾರಣವೇನೆಂದು ವಿಚಾರಿಸಿದಾಗ ಅವರು 'ಬಡತನ', 'ಆರ್ಥಿಕ ತೊಂದರೆ' ಮೊದಲಾದ ಕಾರಣಗಳನ್ನು ಕೊಟ್ಟರು. ಇಷ್ಟೇ ಅಲ್ಲದೆ ಅವರ ಮನಸ್ಸನ್ನು ಒಳಹೊಕ್ಕು ನೋಡಿದಾಗ ಅವರಲ್ಲಿ ಶಿಕ್ಷಣದ ಬಗ್ಗೆ ಪರಿಜ್ಞಾನ ಇಲ್ಲದಿರುವುದು, ತಂದೆ-ತಾಯಿಗಳಿಗೆ ಶಿಕ್ಷಣ ಇಲ್ಲದಿರುವುದು, ದುಡಿಮೆಯ ಹಿನ್ನೆಲೆ, ಹಬ್ಬಗಳಲ್ಲಿಯ ಸಾಮಾಜಿಕ ಪರಿಸರ, ಮೂಢನಂಬಿಕೆ, ಪ್ರತ್ಯೇಕ ವಾಸ, ಶಿಕ್ಷಣದ ಬಗ್ಗೆ ಸರಿಯಾದ ಮಾರ್ಗದರ್ಶನವಿಲ್ಲದೇ ಇರುವುದು ಇವೆಲ್ಲವೂ ಮಹಿಳೆಯ ಶೈಕ್ಷಣಿಕ ಪ್ರಗತಿಯನ್ನು ಕುಂಠಿತಗೊಳಿಸುವಲ್ಲಿ ಪ್ರಭಾವ ಬೀರುವ ಅಂಶಗಳಾಗಿವೆ.

೨೦೦೧ ನೇ ವರ್ಷವನ್ನು ಮಹಿಳಾ ಸಬಲೀಕರಣ ವರ್ಷವೆಂದು ಕೇಂದ್ರ ಸರ್ಕಾರ ಘೋಷಣೆ ಮಾಡಿದೆ. ಮಹಿಳೆಯರ ಆರ್ಥಿಕ, ಸಾಮಾಜಿಕ ಮತ್ತು ರಾಜಕೀಯ ಅಭ್ಯುದಯದ ಕಾರ್ಯಗಳನ್ನು ಅನುಷ್ಠಾನಕ್ಕೆ ತರಲಾಗುತ್ತಿದೆ. ಇನ್ನೊಂದೆಡೆ ಮಹಿಳೆಗಾಗಿಯೇ ವಿಶ್ವವಿದ್ಯಾನಿಲಯಗಳಲ್ಲಿ ಮಹಿಳಾ ಅಧ್ಯಯನ ಕೇಂದ್ರಗಳನ್ನು ತೆರೆಯಲಾಗತ್ತಿದ್ದರೂ ಮಹಿಳಾ ಅಧ್ಯಯನಗಳು ನಡೆಯುತ್ತಿದ್ದರೂ ಈ ಹಟ್ಟಿಗಳಲ್ಲಿರುವ ಮಹಿಳೆಯರ ಸ್ಥಿತಿಗತಿಗಳಿಗೆ ಮಾತ್ರ ಪರಿಹಾರ ದೊರೆಯದಾಗಿದೆ. ಇವರ ಸ್ಥಿತಿ ತುಂಬಾ ಶೋಚನಿಯವಾಗಿದೆ. ಇದಕ್ಕೆ ಪ್ರಮುಖ ಕಾರಣಗಳೆಂದರೆ, ಈ ಸಮುದಾಯದಲ್ಲಿರುವ ಕಟಿಬದ್ಧ ಸಂಪ್ರದಾಯಗಳು, ರೂಢಿಗಳು ಮಾತ್ರ ಬದಲಾವಣೆಯಾಗದೆ ಈ ಸತ್ ಕರ್ಮಾಚರಣೆಗಳೇ ಕಾಡುಗೊಲ್ಲ ಸಮುದಾಯದ ಮಹಿಳೆಯನ್ನು ಶೈಕ್ಷಣಿಕವಾಗಿ ತೀರಾ ಹಿಂದುಳಿದ ಮಟ್ಟದಲ್ಲಿ ಅಥವಾ ಕಡಿಮೆ ಪ್ರಮಾಣದಲ್ಲಿರಲು ಕಾರಣಗಳಾಗಿವೆ. ಇದಕ್ಕೆ ಇಲ್ಲಿನ ಪರಿಸರ, ಸಮಾಜ, ನಿರ್ಮಾಣ ಮಾಡಿಕೊಟ್ಟಿದೆ.

ಹೇಗೆಂದರೆ, ಮೂಲತಃ ಮಾತೃಪ್ರಧಾನವಾಗಿದ್ದ ಈ ಸಮುದಾಯದ ಮೇಲೆ ವೈಧಿಕ ಪ್ರಣೀತ ಧರ್ಮ, ವಿಚಾರಗಳ ಪ್ರಭಾವದಿಂದಾಗಿ ಪುರುಷಪ್ರಧಾನ ವ್ಯವಸ್ಥೆಯು ಕಾಲಿಟ್ಟಿತು. ಸೂಕ್ಷ್ಮವಾಗಿ ಗಮನಿಸಿದಾಗ ಈ ಪುರುಷ ಪ್ರಾಧಾನ್ಯತೆಯು ಒಂದು ಅಸ್ತ್ರವಾಗಿ ಮಹಿಳೆಯು ಅಭಿವೃದ್ಧಿಯಾಗದಂತೆ ತಡೆಯುತ್ತಿದೆ. ಅದರಲ್ಲೂ ಲಿಂಗ ತಾರತಮ್ಯ ನೀತಿಯಿಂದ ಈ ಸಮುದಾಯದಲ್ಲಿ ಮಹಿಳೆಯರ ಏಳಿಗೆ ಕಠಿಣತರವಾಗಿದೆ. ಇದರಿಂದಾಗಿ ಮಹಿಳೆ ಶಿಕ್ಷಣ ಪಡೆದು ಸುಶಿಕ್ಷಿತಳಾಗುವಲ್ಲಿ ವಿಫಲಳಾಗುತ್ತಿದ್ದಾಳೆ. ಕಾರಣ ಸ್ತ್ರೀ ಕೇವಲ ಮನೆಯ ಕೆಲಸವನ್ನು ಮತ್ತು ಹೊಲದ ಕೆಲಸವನ್ನು ಮಾಡಿಕೊಂಡಿರಬೇಕು. ಇದಕ್ಕಾಗಿ ಅವಳು 'ಎಷ್ಟೇ ಓದಿದರೂ ಮನೆಯಲ್ಲಿ ಕಸಮುಸರೆ ತೊಳೆಯುವುದು ತಪ್ಪಲ್ಲ' ಎಂಬ ಹುಚ್ಚು ಧೋರಣೆಯನ್ನು ಇವಳ ಶೈಕ್ಷಣಿಕತೆಯ ಮೇಲೆ ಹೇರುವುದರಿಂದ ಅವಳ ಪ್ರಗತಿಗೆ ಕಂಟಕವಾಗಿದೆ.

ಈ ಸಮುದಾಯದಲ್ಲಿ ಶೇಕಡಾ ೫೦ ರಷ್ಟು ಮಹಿಳೆಯರು ಪ್ರೌಢಶಾಲಯ ಹಂತದಲ್ಲಿಯೇ ಶಾಲೆ ಬಿಟ್ಟವರಾಗಿದ್ದಾರೆ. ಇದಕ್ಕೆ ಪ್ರಮುಖ ಕಾರಣವೆಂದರೆ ಬಡತನ. ಇದು ಮಹಿಳೆಯನ್ನು ಎಲ್ಲ ರಂಗಗಳಿಂದ

ಹಿಂದುಳಿಯುವಂತೆ ಮಾಡುವಲ್ಲಿ ಪ್ರಮುಖ ಪಾತ್ರ ವಹಿಸುತ್ತದೆ. ಸಾಮಾನ್ಯವಾಗಿ ಈ ಕಾಡುಗೊಲ್ಲ ಜನಾಂಗದ ಮಹಿಳೆಯ ತಂದೆ-ತಾಯಿಗಳ ಆರು ತಿಂಗಳುಗಳ ಕಾಲ ಅಂದರೆ ಮಳೆಗಾಲದಲ್ಲಿ ಮಾತ್ರ ತಮ್ಮ ಸ್ವಂತ ಊರುಗಳಲ್ಲಿದ್ದು ಇನ್ನುಳಿದ ಆರು ತಿಂಗಳುಗಳ ಕಾಲ ಬೇರೆ ಬೇರೆ ಊರುಗಳಿಗೆ ಅಂದರೆ ನಗರಗಳಿಗೆ ವಲಸೆ ಹೋಗಿ ತಮ್ಮ ಜೀವನವನ್ನು ನಿರ್ವಹಿಸಿಕೊಳ್ಳುವರು. ಅಂತಹ ಸಂದರ್ಭದಲ್ಲಿ ಮಕ್ಕಳನ್ನು ತಮ್ಮ ಜೊತೆಯಲ್ಲಿಯೇ ಕರೆದುಕೊಂಡು ಹೋಗುವುದರಿಂದ ಮಕ್ಕಳ ವಿದ್ಯಾಭ್ಯಾಸ ಮೊಟಕುಗೊಳ್ಳುತ್ತದೆ. ಅದರಲ್ಲಿ ಹೆಣ್ಣುಮಕ್ಕಳ ವಿದ್ಯಾಭ್ಯಾಸದ ಮೇಲೆ ಇವರ ದಿವ್ಯ ನಿರ್ಲಕ್ಷ್ಯವೇ ಸರಿ.

ಸಾಮಾನ್ಯವಾಗಿ ಗೊಲ್ಲ ಸಮುದಾಯದಲ್ಲಿ ತಂದೆತಾಯಿಗಳು ತಮ್ಮ ಹೆಣ್ಣುಮಕ್ಕಳನ್ನು ಶಾಲೆಗೆ ಕಳುಹಿಸಿದರೆ ಅದು ಪ್ರಾಥಮಿಕವಾಗಬಹುದು, ಮಾಧ್ಯಮಿಕವಾಗಬಹುದು, ಇಲ್ಲವೇ ಹೆಚ್ಚೆಂದರೆ ಪ್ರೌಢ ಶಿಕ್ಷಣಕ್ಕೆ ಕೊನೆಯಾಗುತ್ತದೆ. ಈ ಹಂತದಲ್ಲಿ ಆ ಹೆಣ್ಣು ಮಗು ಏನಾದರೂ ಪ್ರಕೃತಿದತ್ತ ಬೆಳವಣಿಗೆಯಿಂದಾಗಿ ಋತುಮತಿಯಾದರೆ ಅವಳನ್ನು ಅಂದಿನಿಂದಲೇ ಶಾಲೆಗೆ ಕಳಿಸುವುದಿಲ್ಲ. ಕಾಲೇಜು ಶಿಕ್ಷಣವೂ ಅಷ್ಟಕಷ್ಟೇ. ಇನ್ನು ವಿಶ್ವವಿದ್ಯಾಲಯದ ಶಿಕ್ಷಣದ ಮಾತಂತೂ ದೂರದ ಮಾತೇ ಸರಿ. ಈ ಅಧ್ಯಯನಕಾರ ಮೊಳಕಾಲ್ಮೂರು ತಾಲ್ಲೂಕಿನ ಗೊಲ್ಲರ ಹಟ್ಟಿಗಳಿಗೆ ಭೇಟಿಕೊಟ್ಟಂತಹ ಸಂದರ್ಭದಲ್ಲಿ ನಿಮ್ಮ ಹೆಣ್ಣು ಮಕ್ಕಳನ್ನು ಪ್ರೌಢ ಶಿಕ್ಷಣ, ಕಾಲೇಜುಗಳಿಗೆ ಏಕೆ ಕಳಿಸುವುದಿಲ್ಲ ಎಂದು ಪ್ರಶ್ನಿಸಿದಾಗ ಅವರುಗಳಿಂದ ಬಂದಂತಹ ಉತ್ತರ "ನಾವು ಕೈಗೆ ಬಂದ ಹೆಣ್ಣುಮಕ್ಕಳನ್ನು ಕಾಲೇಜಿಗೆ ಕಳಿಸುವುದಿಲ್ಲ. ಏಕೆಂದರೆ ಒಂದು ವೇಳೆ ಅವಳು ಪ್ರೀತಿ ಪ್ರೇಮ ಎಂದು ಬೇರೆ ಸಮುದಾಯದ ಹುಡುಗನ ಸಹವಾಸ ಬೆಳೆಸಿದರೆ ಅದು ತಮ್ಮ ಹಟ್ಟಿಗಷ್ಟೇ ಅಲ್ಲದೆ ತಮಗೂ ಅವಮಾನವಾಗಿ ಮರ್ಯಾದೆಯಿಂದ ತಲೆ ಎತ್ತಿಕೊಂಡು ಬಾಳುವುದಕ್ಕಾಗೋಲ್ಲ" ಎಂಬ ಇವರ ಮುಗ್ಧತೆಯ ಮಾತುಗಳು ಇವರಲ್ಲಿನ ಮಹಿಳೆಯರು ಹಿಂದುಳಿದಿರುವಿಕೆಯನ್ನು ಸಾಬೀತು ಪಡಿಸುತ್ತದೆ.

ಈ ಸಮುದಾಯದಲ್ಲಿ ಏರ್ಪಡುವ ಬಾಲ್ಯವಿವಾಹಗಳೂ ಕೂಡ ಸ್ತ್ರೀಯು ಶಿಕ್ಷಣದಲ್ಲಿ ಹಿಂದುಳಿಯುವಿಕೆಗೆ ಪ್ರಮುಖವಾದ ಅಂಶವಾಗಿದೆ. ಈ ಬಾಲ್ಯ ವಿವಾಹಗಳು ಸ್ತ್ರೀಯ ಬೆಳವಣಿಗೆಯ ಪ್ರಾರಂಭಿಕ ಹಂತದಲ್ಲಿಯೇ ಜರುಗುವುದರಿಂದ ಅವಳ ಕೋಮಲವಾದ ಮಧುರ ಕನಸುಗಳು ಕಮರಿ ಬಾಡಿಹೋದ ಎಷ್ಟೋ ಉದಾಹರಣೆಗಳು ದೊರೆಯುತ್ತವೆ. ಬಾಲ್ಯವಿವಾಹಕ್ಕೆ ಒಳಪಟ್ಟು ಮಗು ಆ ಸಮುದಾಯದಲ್ಲಿ ಮಗುವಿನಂತೆ ವರ್ತಿಸಿದರೆ ತಪ್ಪಾಗುತ್ತದೆ. ಅದಕ್ಕೆ ಹಿರಿಯರ ಆಕ್ಷೇಪಣೆಯೂ ಸಹ ಇದೆ. ಆದ್ದರಿಂದ ಆ ಮಗು ವಿವಾಹವಾದ ನಂತರ ಮಹಿಳೆಯ ನಡೆ ನುಡಿಗಳು, ಆಚಾರ-ವಿಚಾರಗಳು, ಉಡುಗೆ-ತೊಡುಗೆಗಳು, ಆಚರಣೆಗಳು ಯಾವ ರೀತಿಯಾಗಿ ಕರ್ಮಾಚಾರಿಣಿಯಾಗಿ ಕರ್ತವ್ಯ ನಿರ್ವಹಿಸಬೇಕು ಮೊದಲಾಗಿ ಸಮುದಾಯದ ಅಲಿಖಿತ ಶಾಸನಗಳಿಂದಾಗಿ ಹೆಣ್ಣುಮಗು ಸಂಪೂರ್ಣವಾಗಿ ಶಿಕ್ಷಣದಿಂದ ವಂಚಿತಳಾಗಿ ಅವಳ ಕನಸುಗಳು, ಮನಸ್ಸಿನ ಆಸೆ-ಆಕಾಂಕ್ಷೆಗಳು ಈಡೇರದೆ ಪುರುಷ ವರ್ಗದ ಹುನ್ನಾರದಿಂದಾಗಿ ಚಾಲನೆ ನೀಡಿದರೆ ಚಲಿಸುವ ಕೀಲುಗೊಂಬೆಯಂತಾಗುತ್ತಾಳೆ. ಇದರಿಂದ ಎಷ್ಟೋ ಹೆಣ್ಣು ಮಕ್ಕಳ ಕನಸುಗಳು, ಮನಸ್ಸಿನ ಆಸೆ-ಆಕಾಂಕ್ಷೆಗಳು ಕೈಗೂಡದೆ ಅಭಿವೃದ್ಧಿಯಲ್ಲಿ ಪಾತ್ರವಹಿಸಲು ಸಾಧ್ಯವಾಗುತ್ತಿಲ್ಲ. ಇಲ್ಲಿ ಪುರುಷ ವರ್ಗ ಮಾತ್ರ ದುಡಿಮೆ ಹಾಗೂ ಕುಟುಂಬದ ನಿಯಂತ್ರಣ ಇವೆರಡನ್ನು ತನ್ನ ಅಧೀನದಲ್ಲಿಟ್ಟುಕೊಂಡು ಮಹಿಳೆಯರ ಮೇಲೆ ಸವಾರಿ ಮಾಡುತ್ತಿರುವುದು ಕಂಡುಬರುತ್ತದೆ.

ಜಾತಿ ತಾರತಮ್ಯತೆಯಿಂದಾಗಿ ಈ ಸಮುದಾಯ ಊರಿನಿಂದ ಹೊರಗಡೆ ಹಟ್ಟಿಗಳನ್ನು ಕಟ್ಟಿಕೊಂಡು ಜೀವಿಸುತ್ತಿರುವುದರಿಂದ ಈ ಸಮುದಾಯದವರಿಗೆ ಅದರಲ್ಲಿಯೂ ಹೆಣ್ಣುಮಕ್ಕಳಿಗೆ ಶಿಕ್ಷಣದ ಗಂಧ ಗಾಳಿ ಗೊತ್ತಿಲ್ಲ. ಹಟ್ಟಿಗಳಲ್ಲಿ ಶಾಲೆಗಳ ವ್ಯವಸ್ಥೆ ಇಲ್ಲದಿರುವುದು ಕೂಡ ಶಿಕ್ಷಣಕ್ಕೆ ಅಡ್ಡಿಯಾಗಿದೆ. ಆದರೆ ಕೆಲವೆಡೆ ಹಟ್ಟಿಗಳ ಪಕ್ಕದಲ್ಲಿಯೇ ಶಾಲೆಗಳು ಇದ್ದರೂ ಸಹ ವಿದ್ಯಾಭ್ಯಾಸಕ್ಕೆ ಮನಸ್ಸು ಮಾಡದೆ ಅಕ್ಷರ ನಮಗ್ಯಾಕೆ, ನಮ್ಮ ಕಸುಬು ಮಾಡಿಕೊಂಡು ಹೋದರೆ ಸಾಕು. ನಾವು ಓದಿ ಏನು ಕೆಲಸ ಮಾಡಬೇಕಾಗಿಲ್ಲ ಎಂಬ ಭಾವನೆಯಿಂದ ಈ ಸಮುದಾಯ ಸಂಪೂರ್ಣವಾಗಿ ಶಿಕ್ಷಣದಿಂದ ಹಿಂದುಳಿದಿದೆ. ಜೊತೆಗೆ ಮಹಿಳೆ ಸ್ವಭಾವತಃ ಸೂಕ್ಷ್ಮ ಸ್ವಭಾವದವಳಾದ್ದರಿಂದ ಅವಳು ದೂರದ ಊರಿಗೆ ಹೋಗಿ ವ್ಯಾಸಂಗ ಮಾಡಿ ದುಡಿದು ಹಾಕುವುದು ಬೇಕಾಗಿಲ್ಲ. ಅವಳು ಆದಷ್ಟು ಮನೆಯಲ್ಲಿಯೇ ಕೆಲಸಗಳನ್ನು ಮಾಡಿಕೊಂಡು ಇರಲಿ ಎಂಬ ಭಾವನೆ ಇವರಲ್ಲಿದೆ.

ಇಂದು ದೇಶದಲ್ಲಿ ಮಹಿಳೆಯ ಸ್ಥಾನಮಾನ ಅದರಲ್ಲಿಯೂ ಶಿಕ್ಷಣಕ್ಕೆ ಹೆಚ್ಚು ಪ್ರೋತ್ಸಾಹಕೊಡುತ್ತಿರುವ ಸದಂರ್ಭಗಳಲ್ಲಿ ಕಾಡುಗೊಲ್ಲ ಜನಾಂಗದ ಮಹಿಳೆಯರ ಶೈಕ್ಷಣಿಕ ಸ್ಥಿತಿಗತಿಯನ್ನು ನೋಡಿದರೆ ಅಸಮಾನ ರೀತಿಯ ಸವಲತ್ತುಗಳು, ಸಮಾನತೆಯ ಹಂಚಿಕೆಯಲ್ಲಿ ತಾರತಮ್ಯವಿದೆಯೆಂದು ತಿಳಿಯುತ್ತದೆ. ಇಡೀ ಪ್ರಪಂಚವೇ ಒಂದು ಕಡೆ ಸಾಗುತ್ತಿದ್ದರೆ ಬುಡಕಟ್ಟುಗಳಲ್ಲಿಯೇ ಹೆಚ್ಚಾಗಿ ನಾಗರಿಕತೆಯಿಂದ ದೂರವಿರುವ, ಮೂಲ ಬುಡಕಟ್ಟು ಸ್ಥಿತಿಯಲ್ಲಿರುವ ಕಾಡುಗೊಲ್ಲ ಜನಾಂಗದ ಬಹುಸಂಖ್ಯಾತ ಅಶಿಕ್ಷಿತ ಮಹಿಳೆಯ ಸ್ಥಿತಿ ಚಿಂತಾಜನಕವಾಗಿದೆ.

'ಹೆಣ್ಣೊಂದು ಕಲಿತರೆ ಶಾಲೆಯೊಂದು ತೆರೆದಂತೆ' ಎಂಬ ಮಾತು ಬಹಳಷ್ಟು ಹಿಂದಿನ ದಿನಗಳಿಂದಲೂ ಹೇಳುತ್ತಾ ಬರುತ್ತಿದ್ದಾರೆ. ಏಕೆಂದರೆ ಮನೆಯೇ ಮೊದಲ ಪಾಠ ಶಾಲೆ, ತಾಯಿಯೇ ಮೊದಲ ಗುರು ಎಂಬಂತೆ, ಮನೆಯಲ್ಲಿರುವ ಮಕ್ಕಳಿಗೆ ಶಿಕ್ಷಣವನ್ನು ಕಲಿಸುವಲ್ಲಿ ತಾಯಿ ಪಾತ್ರ ಅಗಾಧವಾದುದಾಗಿದೆ. ಇಲ್ಲಿ ಮಹಿಳೆಗೆ ಶಿಕ್ಷಣವನ್ನು ಕೊಟ್ಟರೆ ಮಾತ್ರ ಕುಟುಂಬದ ಮತ್ತು ಮಕ್ಕಳ ಓರೆಕೋರೆಗಳನ್ನು ತಿದ್ದಲು ಸಹಾಯಕವಾಗುತ್ತದೆ. ಮಹಿಳೆಗೇ ಶಿಕ್ಷಣವನ್ನು ನೀಡದಿದ್ದಲ್ಲಿ ಇದು ಹೇಗೆ ಸಾಧ್ಯ. ಈ ಕಾಡುಗೊಲ್ಲ ಸಮುದಾಯದಲ್ಲಿ ಮಹಿಳೆಯು ಶಿಕ್ಷಣವನ್ನು ಕಲಿಯುವುದು ಇಷ್ಟವಿಲ್ಲವಾಗಿದೆ. ಇಲ್ಲಿ ಹೆಣ್ಣು ಶಿಕ್ಷಣವನ್ನು ಕಲಿಯಬೇಕು ಎಂಬ ಹುಮ್ಮಸ್ಸು ಇದ್ದರೂ ಸಹ ಅದನ್ನು ಚಿಗುರುವಾಗಲೇ ಚಿವುಟಿ ಹಾಕಲಾಗುತ್ತದೆ.

ಇತ್ತೀಚಿನ ದಿನಗಳಲ್ಲಿ ಅಕ್ಷರ ಕಲಿತ ನಾರಿ ಪ್ರಗತಿಗೆ ದಾರಿ ಎಂಬ ಮಾತು ಪ್ರತಿಧ್ವನಿಸುತ್ತಿದ್ದರೂ ಇದು ಕೇವಲ ಸಮಾಜದಲ್ಲಿ ಮುಂದುವರೆದ, ಅದರಲ್ಲಿಯೂ ಉನ್ನತ ವರ್ಗದವರಿಗೆ ಮಾತ್ರ ಅನ್ವಯಿಸುತ್ತದೆ. ಏಕೆಂದರೆ ಈ ಸಮುದಾಯದವರು ತಮ್ಮ ಹೆಣ್ಣುಮಕ್ಕಳನ್ನು ಅವರು ಎಲ್ಲಿಯವರೆಗೆ ವಿದ್ಯಾಭ್ಯಾಸವನ್ನು ಮಾಡುವರೋ ಅಲ್ಲಿಯವರೆಗೆ ತಂದೆ ತಾಯಿಗಳು ಕಳುಹಿಸುವರು. ಹೀಗೆ ಅಭ್ಯಸಿಸಿದ ಹೆಣ್ಣು ಸರ್ಕಾರಿ ಉದ್ಯೋಗದಲ್ಲಿ ತೊಡಗಿದರೆ ತನ್ನ ಕುಟುಂಬವೇ ಸುಖೀ ಕುಟುಂಬವಾಗುತ್ತದೆ. ಅದರಲ್ಲಿಯೂ ಸಾಮಾಜಿಕವಾಗಿ, ಆರ್ಥಿಕವಾಗಿ, ಶೈಕ್ಷಣಿಕವಾಗಿ ಮುಂದುವರೆಯುತ್ತದೆ. ಆದರೆ ಈ ಕಾಡುಗೊಲ್ಲ ಸಮುದಾಯದಲ್ಲಿ ಈ ಮಾತು ಅವರ ಕಿವಿಯ ಮೇಲೆ ಬೀಳುವುದೇ ಇಲ್ಲ. ಆದರೆ ಕೆಲವೊಂದು ವಿದ್ಯಾವಂತ ನಗರವಾಸಿಗಳು ಮಾತ್ರ ತಮ್ಮ ಮಕ್ಕಳನ್ನು ಈ ಸಂಪ್ರದಾಯಗಳೆಂಬ ಸಂಕೋಲೆಗಳನ್ನು ಮುರಿದು ಅಭ್ಯಾಸವನ್ನು ಮಾಡಿಸಲಿಕ್ಕೆ ಕಳುಹಿಸುತ್ತಿದ್ದಾರೆ. ಆದರೆ ಇದು ಕೇವಲ ಬೆರಳೆಣಿಕೆಯಷ್ಟು ಮಾತ್ರ ಕಂಡುಬರುತ್ತದೆ.

**೪.೪. ಸಾಂಸ್ಕೃತಿಕ ಪಲ್ಲಟಗಳು**

ಸಮಕಾಲೀನ ಸಂದರ್ಭದ ಆವರ್ತದಲ್ಲಿ ಗೊಲ್ಲ ಮಹಿಳೆ ಅನೇಕ ಬದಲಾವಣೆಗಳನ್ನು ಹೊಂದಿದ್ದಾಳೆ. ಸಂಪ್ರದಾಯವನ್ನು ಕೇವಲ ನೆನಪಾಗಿಟ್ಟುಕೊಂಡು ಮುಂದೆ ಬದುಕುವ ದಾರಿಯನ್ನು ಹುಡುಕುತ್ತಿದ್ದಾಳೆ. ಹಾಗಾಗಿ ಅವಳು ಪರಿವರ್ತನೆಯಾಗುವುದು ಅವಶ್ಯವಾಗಿದೆ.

**ಗೊಲ್ಲಕಡಗ:** ಇದನ್ನು ಸಂಪ್ರದಾಯಸ್ಥರಾದ ಗೊಲ್ಲ ಮಹಿಳೆಯರು ಬಲಮುಂಗೈಗೆ ಹಿತ್ತಾಳೆಯ ಅಗಲವಾದ ಸುತ್ತಿನ ಬಳೆಯೊಂದು ಮದುವೆಯಾಗಿ ಮೂರು ತಿಂಗಳು ಇಲ್ಲವೇ ಒಂದು ವರ್ಷ ತುಂಬುವುದರೊಳಗೆ ಇದನ್ನು ಧರಿಸಲೇಬೇಕಿತ್ತು. ಕಾರಣ ಇದು ಆ ಮಹಿಳೆಯ ಸೌಭಾಗ್ಯದ ಸಂಕೇತವಾಗಿದ್ದರಿಂದ ಜೊತೆಗೆ ಸಂಸ್ಕೃತಿಯ ಪ್ರತೀಕವಾದ ಪಶುಪಾಲಕ ಸಂಸ್ಕೃತಿಯನ್ನು ಪ್ರತಿನಿಧಿಸುವಂತದ್ದಾಗಿತ್ತು.

ಗೊಲ್ಲಕಡಗವನ್ನು ಕೃಷ್ಣಕಡಗ ಎಂದು ಕರೆಯಲಾಗುತ್ತಿತ್ತು. ಗೊಲ್ಲ ಮಹಿಳೆಯರು ಈ ಲೋಕದ ಅವರ ಗಂಡ ಸತ್ತರೆ ಎಂದೂ ವಿಧವೆಯೆಂದು ಭಾವಿಸದೆ ಗೊಲ್ಲಕಡಗ ಎಲ್ಲಿಯವರೆಗೆ ತನ್ನ ಕೈಯಲ್ಲಿರುತ್ತದೆಯೋ ಅಲ್ಲಿಯವರೆಗೆ ತನ್ನನ್ನು ಮುತ್ತೈದೆಯೆಂದು ಭಾವಿಸಿದ್ದು, ನಿತ್ಯ ಸುಮಂಗಲಿಯಾಗಿಯೇ ಇರುವಳು. ಇದನ್ನು ಅವಳು ಬಲವಾಗಿ ನಂಬಿಕೊಂಡು ಬಂದಿದ್ದಳು. ಆದರೆ ಇಂದು ನಾಗರಿಕತೆಯ ಪ್ರಭಾವದಿಂದ ಮತ್ತು ಅವಳಲ್ಲಿನ ಕೀಳರಿಮೆಯ ಮನೋಭಾವ, ಜೊತೆಗೆ ಇತರೆ ಸಮುದಾಯದವರು ತನ್ನನ್ನು ನೋಡುವ ನೋಟ, ನಡೆಸಿಕೊಳ್ಳುವ ರೀತಿ-ನೀತಿಯಿಂದ ಗೊಲ್ಲಕಡಗ ಇಂದಿನ ಆಧುನಿಕ ಮಹಿಳೆ ತಿರಸ್ಕರಿಸಿ ಸಾಂಸ್ಕೃತಿಕವಾಗಿ ಪಲ್ಲಟಗೊಂಡಿದ್ದಾಳೆ.

ಇದಕ್ಕೆ ಮುಖ್ಯ ಪ್ರೇರಣೆ ಬದಲಾಗುತ್ತಿರುವ ಸಮಾಜ. ಇದರಿಂದ ಅವಳು ತನ್ನ ಪುರಾತನ ನಂಬಿಕೆಗಳಿಗೆ ನಾಂದಿ ಹಾಡಿದಳು.

**ರವಿಕೆ ರಹಿತ ಸಂಪ್ರದಾಯ**

ಕಾಡುಗೊಲ್ಲ ಸಮುದಾಯದ ಮಹಿಳೆ ಶತಶತಮಾನಗಳಿಂದಲೂ ಈ ರವಿಕೆ ರಹಿತ ಸಂಪ್ರದಾಯವನ್ನು ಚಾಚೂ ತಪ್ಪದೆ ಅನುಸರಿಸಿಕೊಂಡು ಬಂದಿದ್ದಾಳೆ. ಮದುವೆಯಾಗುತ್ತಲೇ ರವಿಕೆ ತೊಡುವ ಸಂಪ್ರದಾಯವನ್ನು ಹಿಂದೆ ಬಿಡುತ್ತಿದ್ದಳು. ಕಾರಣ ತಮ್ಮ ರವಿಕೆಯನ್ನು ಶ್ರೀಕೃಷ್ಣನು ಕದ್ದೊಯ್ದಿದ್ದಾನೆ ಅದಕ್ಕೆ ರವಿಕೆ ತೊಡುವುದಿಲ್ಲವೆಂಬುದು ಕಾರಣವಾಗಿತ್ತು. ಆದರೆ ಇಂದಿನ ಜಾಗತಿಕ ಸಂದರ್ಭದಲ್ಲಿ ಆಧುನಿಕ ಗೊಲ್ಲ ಮಹಿಳೆ ತನ್ನ ಸಂಪ್ರದಾಯ ಬದ್ಧವಾಗಿ ಬಂದಿರುವ ಉಡುಪನ್ನು ಮೊಟ್ಟಮೊದಲ ಬಾರಿಗೆ ತಿರಸ್ಕರಿಸಿದ್ದಾಳೆ. ಇದಕ್ಕೆ ಜೀವನ ಕಲಿಸಿದ ಪಾಠವೇ ಸಾಕ್ಷಿ. ಅರೆನಗ್ನಳಾದ ಇವಳನ್ನು ಜನಸಾಮಾನ್ಯರು ನೋಡುವ ದೃಷ್ಟಿ ಅತ್ಯಂತ ಕೆಟ್ಟದ್ದಾಗಿದ್ದು ಅವಳಿಗೆ ಈ ಸಮಾಜದಲ್ಲಿ ಗೌರವವೇ ಇಲ್ಲದಂತಾಗಿತ್ತು. ಇದರಿಂದ ನೆಮ್ಮದಿಯಿಂದ ಬದುಕಲು ಕಠಿಣವಾಗಿತ್ತು. ಇದರಿಂದ ಅವಳು ಅರೆನಗ್ನತೆಯ ಉಡುಪನ್ನು ತೊರೆದು, ಮೂಢನಂಬಿಕೆಗೆ ತಿಲಾಂಜಲಿಯನ್ನಿಟ್ಟು ಇತರೆ ಸಮುದಾಯದ ಮಹಿಳೆಯರಂತೆ ತುಂಬು ಉಡುಪನ್ನು (ರವಿಕೆ) ಧರಿಸಿ ಸಾಂಸ್ಕೃತಿಕವಾಗಿ ಇಂದು ಅವಳು ಎಲ್ಲ ಮಹಿಳೆಯರಂತೆ ಏಕರೂಪದ ಉಡುಗೆಯನ್ನು ತೊಡುತ್ತಿದ್ದಾಳೆ.

ಮಹಿಳೆಯರ ವಿಷಯದಲ್ಲಿ ಅಮಾನವೀಯವಾಗಿ ನಡೆದುಕೊಳ್ಳುವ ಒಂದು ನಿಕೃಷ್ಟವಾದ ಪದ್ಧತಿಯು ಈ ಸಮುದಾಯದಲ್ಲಿತ್ತು. ಈ ಸಮುದಾಯದ ಮಹಿಳೆ ಬೇರೆ ಸಮುದಾಯದ ಮಹಿಳೆಯಂತೆ ಹೆರಿಗೆಯಾದಾಗ ಹಿರಿಯರ ಆರೈಕೆಯಲ್ಲಿ ಮನೆಯಲ್ಲಿ ಕಳೆಯುವುದು ಕನಸಿನ ಮಾತಾಗಿತ್ತು. ಮೈಲಿಗೆ, ಸೂತಕ, ಅಪವಿತ್ರತೆ ಎಂಬ ಕಾರಣಗಳಿಗಾಗಿ ಹೆರಿಗೆಯಾದಂದಿನಿಂದ ಸಂಪೂರ್ಣವಾಗಿ ಮೂರು ತಿಂಗಳ ಕಾಲ ಹಟ್ಟಿಯಿಂದಲೇ ಹೊರಗಿಡುತ್ತಿದ್ದುದರೀದ ಬಾಣಂತಿ ಮತ್ತು ಮಕ್ಕಳಲ್ಲಿ ಆಗುವ ಸಾವು ನೋವುಗಳ ಸಂಖ್ಯೆ ಅತ್ಯಧಿಕವಾಗಿತ್ತು. ಹೊಸತಾಗಿ ಋತುಮತಿಯಾದ ಬಾಲೆಯರನ್ನೂ ಸಹ ಹಟ್ಟಿಯಿಂದ ಹೊರಗಿಡಲಾಗುತ್ತಿತು. ಇತ್ತೀಚಿಗೆ ವಿದ್ಯಾವಂತ ಗೊಲ್ಲ ಕುಟುಂಬಗಳಲ್ಲಿ ಬದಲಾವಣೆ ಕಂಡುಬರುತ್ತಿದ್ದು ಈ ಪದ್ಧತಿಯನ್ನು ಕೈ ಬಿಡಲಾಗುತ್ತಿದೆ. ಆದಾಗ್ಯೂ ಗ್ರಾಮೀಣ ಮಹಿಳೆಯರಲ್ಲಿಯೂ ಹೆರಿಗೆಯಾದ ಸಮಯದಲ್ಲಿ ಮಹಿಳೆಯನ್ನು ಹೊರಗಿಡುವ ಅವಧಿ ಇಂದು ೩ ತಿಂಗಳಿಂದ ಒಂದು ತಿಂಗಳು ಅಥವಾ ಹದಿನೈದು ದಿವಸಕ್ಕೆ ಬಂದಿದೆ.

ಆಧುನಿಕತೆಯ ಪ್ರಭಾವದಿಂದ ತೀವ್ರವಾಗಿ ಸಾಂಸ್ಕೃತಿಕ ಸ್ಥಿತ್ಯಂತರಗಳನ್ನು ಕಾಣುತ್ತಿರುವ ಸಮುದಾಯಗಳಲ್ಲಿ ಗೊಲ್ಲ ಸಮುದಾಯವೂ ಒಂದಾಗಿದೆ.

ಕಾಡುಗೊಲ್ಲ ಸಮುದಾಯದ ಮಹಿಳೆ ಒಂದು ಸಂಪ್ರದಾಯಕ್ಕೆ ತನ್ನನ್ನು ಸಮರ್ಪಿಸಿಕೊಂಡಿದ್ದಾಳೆ. ಹೇಗೆಂದರೆ ಹಿಂದಿನ ದಿನಗಳಲ್ಲಿ ಹದಿನಾರು ಮೊಳದುದ್ದದ ದಡಿ ಸೀರೆಯನ್ನು ಮೈ ತುಂಬ ಸುತ್ತಿಕೊಳ್ಳುತ್ತಿದ್ದಳು. ಇದಕ್ಕೆ ಮೂಲ ಕಾರಣ ಅವಳು ರವಿಕೆ ರಹಿತವಾಗಿದ್ದರಿಂದ.[೩] ಆದರೆ ಇಂದು ಇತರೆ ಸಮುದಾಯಗಳಲ್ಲಿ ಬೆರೆಯುವ ಮಹಿಳೆ ತನ್ನ ಬಗ್ಗೆ ತನಗೇ ಚಿಂತಿಸುವ ಕಾಲ ಬಂದಿದೆ. ಏಕೆಂದರೆ ಇಂದಿನ ಜಾಗತಿಕ ದಿನಗಳಲ್ಲಿ ಕಣ್ಣಿಗೆ ಮುದವನ್ನು ನೀಡುವು ರಂಗು ರಂಗಿನ ವಿಧ ವಿಧವಾದ ಬಟ್ಟೆಗಳು ಅವಳನ್ನು ಆಕರ್ಷಿಸಿ ಮನ ಸೂರೆಗೊಂಡಿವೆ. ಹಾಗಾಗಿ ಇಂದು ಅವಳ ನಾಗರಿಕ ಸಮಾಜದಲ್ಲಿ ಬದಲಾವಣೆಯನ್ನು ಕಂಡುಕೊಂಡು ಹದಿನಾರು ಮೊಳದುದ್ದದ ದಡಿಸೀರೆಗೆ ಬದಲಾಗಿ ಇಂದಿನ ಪಾಲಿಸ್ಟರ್, ನೈಲಾನ್ ವಸ್ತ್ರಗಳನ್ನು ತೊಡುತ್ತಿದ್ದಾಳೆ.

ಕೇವಲ ಹಬ್ಬ ಹರಿದಿನಗಳಲ್ಲಿ ಮಾತ್ರ ಈ ಸಮುದಾಯದ ಮಹಿಳೆ ಪವಿತ್ರವಾದ ಸ್ನಾನವನ್ನು ಮಾಡುತ್ತಿದ್ದಾಳೆ. ಉಳಿದ ದಿನಗಳಲ್ಲಿ ಸ್ನಾನ ಮಾಡುವುದು ತುಂಬಾ ಕಡಿಮೆ. ಕಾರಣ ಅವಿರತವಾದ ಕೆಲಸ ಮತ್ತು ಸಂಪ್ರದಾಯವಾಗಿಯೇ ಇತ್ತು. ಇದರಿಂದ ಮಹಿಳೆ ಅನೇಕ ರೋಗ-ರುಜಿನಗಳಿಗೆ ತುತ್ತಾಗಿ ಸಾವನ್ನಪ್ಪುತ್ತಿದ್ದಳು. ಆದರೆ ಇಂದು ಆರೋಗ್ಯವೇ ಮಹಾ ಭಾಗ್ಯ ಎಂಬುದನ್ನರಿತು ಪ್ರತಿ ದಿನ ಇಲ್ಲವೆ ಎರಡು ದಿನಕ್ಕೊಮ್ಮೆಯಾದರೂ ಸ್ನಾನ ಮಾಡುತ್ತಿದ್ದಾಳೆ. ಇದರಿಂದ ಉನ್ನತ ಆರೋಗ್ಯ ಮನಸ್ಸಿನಿಂದ ತನ್ನ ಕೃಷಿ ಕೆಲಸ ಮತ್ತು ಮನೆಯ ಕೆಲಸಗಳನ್ನು

ನಿರ್ವಹಿಸಲು ಶಕ್ತಳಾಗಿದ್ದಾಳೆ. ಈ ಅಂಶ ಅವಳನ್ನು ಸಾಂಸ್ಕೃತಿಕವಾಗಿ ಅವಳು ಬದಲಾವಣೆಯ ಕಡೆ ಹೋಗುತ್ತಿದ್ದಾಳೆ ಎಂಬುದನ್ನು ಸ್ಪಷ್ಟಪಡಿಸುತ್ತದೆ. ತಲೆಗೆ ತುಪ್ಪವನ್ನು ಹಚ್ಚಿಕೊಳ್ಳುತ್ತಿದ್ದುದವಳು ಇಂದು ಕೊಬ್ಬರಿ ಎಣ್ಣೆಯನ್ನು ಹಚ್ಚಿಕೊಳ್ಳುತ್ತಿದ್ದಾಳೆ.

ಶೈಕ್ಷಣಿಕವಾಗಿ ಇಂದು ಅವಳು ತೀರಾ ದೂರ ಸಾಗಿದ್ದಾಳೆ. ಅನಕ್ಷರತೆಯಿಂದ ಕೂಡಿದ್ದ ಈ ಸಮುದಾಯದ ಮಹಿಳೆ ಕಲಿಕೆಯಿಂದ ಬುದ್ಧಿವಂತಳಾಗಿ ಒಳಿತು-ಕೆಡುಕುಗಳ ಬಗ್ಗೆ ಚಿಂತನೆ ಮಾಡುತ್ತಿದ್ದಾಳೆ. ಜೀವನ ಮೌಲ್ಯಗಳ ಬಗ್ಗೆ, ಬದುಕುವ ಪರಿಯ ಬಗ್ಗೆ ಚಿಂತಿಸುತ್ತಿದ್ದಾಳೆ. ಅಂಧಕಾರದ ಮೌಢ್ಯ ನಂಬಿಕೆಗಳ ವಿರುದ್ಧ ಜಾಗತಿಕ ಸಂದರ್ಭದಲ್ಲಿ ಸಮರ ಸಾರಿದ್ದಾಳೆ. ಹಾಗಾಗಿ ಅವಳು ಪ್ರತಿಯೊಂದು ವಿಷಯದಲ್ಲಿ ಬದಲಾವಣೆಗೊಂಡಿದ್ದಾಳೆ. ಇತರೆ ಸಮುದಾಯದ ಮಹಿಳೆಯ ಆದರ್ಶತೆಗೆ ಅರ್ಹಳಾಗಿದ್ದಾಳೆ. ನಂಬಿಕೆಗೆ ಪಾತ್ರವಾಗಿದ್ದಾಳೆ.

ಇಂದು ನಗರೀಕರಣದಿಂದ ತನ್ನ ಸಂಪ್ರದಾಯದ ಹುಲ್ಲುಹಟ್ಟಿಗಳನ್ನು ತೊರೆದು ಇತರೆ ಸಮುದಾಯದ ಜನರಂತೆ ತಾನೂ ಮಾಳಿಗೆ ಮನೆ, ಆರ್.ಸಿ.ಸಿ. ಮನೆಗಳಲ್ಲಿ ವಾಸಿಸಲು ತೊಡಗಿದ್ದಾಳೆ. ತನ್ನ ಅಕ್ಕಪಕ್ಕ ಸಮುದಾಯದ ಸ್ತ್ರೀಯರಂತೆ ಅವಳು ಅಲಂಕಾರದಲ್ಲಿ ಆಭರಣಗಳನ್ನು ಧರಿಸುವಲ್ಲಿ ಅವಳು ಹಳೆಯ ಪದ್ಧತಿಯನ್ನು ಸಂಪೂರ್ಣವಾಗಿ ತೊರೆದು ಬದಲಾಗಿದ್ದಾಳೆ.

ಈ ಸಮುದಾಯದ ಮಹಿಳೆ ಇಂದು ನವನವೀನ ನಾಮಗಳಿಂದ ಆಧುನಿಕತೆಯ ಹಾದಿಯಲ್ಲಿರುವುದು ಒಂದು ಕುತೂಹಲದ ಸಂಗತಿ. ಹಿಂದೆ ಹಳೆಯ ಪದ್ಧತಿಯ ಹೆಸರುಗಳಿಂದ ಕೂಡಿದ ಇವಳ ತೀರಾ ಅನಾಗರಿಕ ಜೀವನವನ್ನು ನಡೆಸುತ್ತಿದ್ದಳು. ಆದರೆ ಇಂದು ಅವಳು ನಾಗರಿಕತೆಗೆ ಆದರ್ಶವಾಗಿದ್ದಾಳೆ.

ವಿವಾಹ ಇದು ಪ್ರತಿಯೊಬ್ಬ ಮಹಿಳೆಯ ಜೀವನದ ಮೊದಲ ಘಟ್ಟ. ಈ ಸಮುದಾಯದಲ್ಲಿ ನಿಶ್ಚಿತಾರ್ಥದ ದಿನ ಕೇವಲ ಹೆಣ್ಣನ್ನು ಮಾತ್ರ ಕರಿಕಂಬಳಿಯ ಗದ್ದಿಗೆಯ ಮೇಲೆ ಕೂಡ್ರಿಸಿ ಕಾರ್ಯಕ್ರಮ ಮುಗಿಸುತ್ತಿದ್ದರು. ಆದರೆ ಇಂದು ವಿದ್ಯಾವಂತ ಯುವಕ-ಯುವತಿಯರು ಮತ್ತು ವಿದ್ಯಾವಂತ ಸರ್ಕಾರಿ ಉದ್ಯೋಗಸ್ಥರು ಹಾರ ಬದಲಾಯಿಸುವ ಕ್ರಮವನ್ನು ಇಟ್ಟುಕೊಂಡಿದ್ದಾರೆ. ಇದೂ ಸಹ ಸಾಂಸ್ಕೃತಿಕ ಪಲ್ಲಟಕ್ಕೆ ಉತ್ತಮ ಉದಾಹರಣೆಯಾಗಿದೆ.

ಹಿಂದಿನ ಕಾಲದಲ್ಲಿ ಕೇವಲ ರಾಗಿಮುದ್ದೆ, ಜೋಳ, ಸಜ್ಜೆ, ನವಣೆ ಇವುಗಳನ್ನು ಆಹಾರವಾಗಿ ಯಥೇಚ್ಛವಾಗಿ ಬಳಸುತ್ತಿದ್ದ ಇವಳು ಇಂದು ಅಕ್ಕಿಯನ್ನು ಪ್ರತಿನಿತ್ಯ ಆಹಾರವಾಗಿ ಬಳಸುವುದಲ್ಲದೆ ಮಹಿಳೆ ವಿಧ ವಿಧ ರೀತಿಯ ಭಕ್ಷ್ಯಗಳನ್ನು ತಯಾರಿಸಿ ಆಹಾರವಾಗಿ ಸೇವಿಸುತ್ತಿದ್ದಾಳೆ.

ಇಷ್ಟೆಲ್ಲಾ ಬದಲಾವಣೆಗಳನ್ನು ನಾವು ಕಂಡುಕೊಳ್ಳಬೇಕಾದರೆ ಇದಕ್ಕೆ ಕಳಂಕಪ್ರಾಯವೆಂಬಂತೆ ಈ ಸಮುದಾಯದ ಮಹಿಳೆ ಇಂದು ರಾಜ್ಯಮಟ್ಟದಲ್ಲಿ ರಾಜಕೀಯದಲ್ಲಿ ಉನ್ನತ ಹುದ್ದೆಯಲ್ಲಿ ಕಾಣಿಸಿಕೊಂಡಿದ್ದಾಳೆ. ಇವರ ಹಿಂದಿನ ಸಂಪ್ರದಾಯವನ್ನು ತೆಗೆದುಕೊಂಡಾಗ ತುಂಬಾ ಹೀನಾಯ ಸ್ಥಿತಿಯಲ್ಲಿ ಕಂಡುಬರುವ ಇವರ ಸಮುದಾಯದ ಮಹಿಳೆ ಇಂದು ಉನ್ನತ ಮಟ್ಟದಲ್ಲಿ ಕಾಣಬೇಕಾದರೆ ಅವಳಲ್ಲಿ ಜಾಗತಿಕ ಬದಲಾವಣೆ, ವೈಜ್ಞಾನಿಕತೆ, ಶಿಕ್ಷಣದ ಪಾರದರ್ಶಕತೆ ಎಲ್ಲವನ್ನೂ ಎತ್ತಿ ಹಿಡಿದಿದ್ದಾಳೆ ಈ ಸಮುದಾಯದ ಮಹಿಳೆ.

ಶ್ರೀಮತಿ ಎಸ್. ನಿರ್ಮಲಾ ನಾಗಪ್ಪನವರು ಬೆಂಗಳೂರು ಗ್ರಾಮಾಂತರ ಜಿಲ್ಲಾ ಕಾಂಗ್ರೆಸ್ ಸಮಿತಿಯ ಕಾರ್ಯದರ್ಶಿಯಾಗಿ ಮತ್ತು ಕರ್ನಾಟಕ ಸರ್ಕಾರ ಕುಕ್ಕುಟ ಮಹಾಮಂಡಳಿ ನಿ ಬೆಂಗಳೂರು, ಆಡಳಿತ ಮಂಡಳಿಯ ಸದಸ್ಯರಾಗಿ ಸೇವೆ ಸಲ್ಲಿಸುತ್ತಿರುವುದು ಗೊಲ್ಲ ಜನಾಂಗದ ಮಹಿಳೆಯರ ರಾಜಕೀಯ ಸಬಲೀಕರಣವನ್ನು ತೋರಿಸುತ್ತದೆ. ೪೦ ವರ್ಷ ವಯೋಮಾನದವರಾದ ಶ್ರೀಮತಿ ಎಸ್. ನಿರ್ಮಲಾ ನಾಗಪ್ಪನವರು ವಿವಿಧ ಸಂಘ-ಸಂಸ್ಥೆಗಳ ಅಧ್ಯಕ್ಷರಾಗಿ ಸದಸ್ಯತ್ವವನ್ನು ಪಡೆದವರಾಗಿದ್ದು ಹತ್ತು ವರ್ಷಗಳಿಗೂ ಹೆಚ್ಚು ಸಮಯದಿಂದ ಕಾಂಗ್ರೆಸ್ ಪಕ್ಷದಲ್ಲಿ ದುಡಿಯುತ್ತಿದ್ದಾರೆ.

ಈ ರೀತಿಯಾಗಿ ಕಾಡುಗೊಲ್ಲ ಸಮುದಾಯದ ಮಹಿಳೆ ಇಂದು ಪ್ರತಿಯೊಂದು ರಂಗದಲ್ಲಿಯೂ ತನ್ನ ದಾಪುಗಾಲನ್ನು ಇಡುತ್ತಿದ್ದಾಳೆ. ಹೀಗೆ ವೈಜ್ಞಾನಿಕವಾಗಿ ಅವಳ ಚಿಂತನೆ ಮಾಡಹೊರಟಿದ್ದಾಳೆ. ತನ್ನ ಆರೋಗ್ಯದ ಬಗ್ಗೆ, ಮಕ್ಕಳ ಕ್ಷೇಮಾಭಿವೃದ್ಧಿಯ ಬಗ್ಗೆ, ಕೌಟುಂಬಿಕ ಅಭಿವೃದ್ಧಿಯ ಬಗ್ಗೆ, ಗಂಡನ ಆರೈಕೆ, ಪೂಜೆ, ಭಕ್ತಿ, ಮಾತು, ಪ್ರೀತಿ, ವಿಶ್ವಾಸ ಎಲ್ಲದರಲ್ಲಿಯೂ ಹಳೆಯ ಪದ್ಧತಿಯಿಂದ ಹೊಸ ಪದ್ಧತಿಗೆ ಇಂದಿನ ಆಧುನಿಕ ಸಮಕಾಲೀನ ಸಂದರ್ಭದಲ್ಲಿ ಮಹಿಳೆ ಹೊಸ ಹೆಜ್ಜೆಯನ್ನಿಟ್ಟು ಮುಂದುವರೆಯುತ್ತಿದ್ದಾಳೆ.

ಅಧ್ಯಾಯ ಐದು

# ಕಾಡುಗೊಲ್ಲ ಮಹಿಳೆಯ ಬಿಕ್ಕಟ್ಟುಗಳು ಮತ್ತು ಸವಾಲುಗಳು

೫.೧ ಸಾಂಸ್ಕೃತಿಕ ಮತ್ತು ಸಾಮಾಜಿಕ ಬಿಕ್ಕಟ್ಟುಗಳು

೫.೨ ಕಾಡುಗೊಲ್ಲ ಮಹಿಳೆ ಮತ್ತು ಆಧುನಿಕತೆಯ ಸವಾಲುಗಳು

ಭಾರತೀಯ ಸಮಾಜವು ಸಂಪ್ರದಾಯಸ್ಥ ಅನೇಕ ಧರ್ಮಗಳ ಸಮಾಜವಾಗಿರುವುದರಿಂದ ಪುರುಷ ಪ್ರಾಧಾನ್ಯತೆಗೆ ಹೆಚ್ಚಿನ ಮಹತ್ವ ನೀಡಿದೆ. ಅಲ್ಲದೆ ಸಮುದಾಯದಲ್ಲಿ ಮಹಿಳೆಯ ಮೇಲೆ ಶೋಷಣೆಗಳನ್ನು ದೌರ್ಜನ್ಯಗಳನ್ನು, ನಿರ್ಬಂಧಗಳನ್ನು ವಿಧಿಸಲಾಗಿದೆ. ಅವಳ ಕನಸುಗಳು ಭಾವನೆಗಳು ಬಯಕೆಗಳೊಂದಿಗೆ ಅವಳ ಜೀವನ ನಾಲ್ಕು ಗೋಡೆಯ ಮಧ್ಯೆಯೇ ಕಳೆದು ಹೋಗಬೇಕು.

ಹೀಗೆ ಪ್ರಾಚೀನ ಕಾಲದಿಂದ ಹಿಡಿದು ಆಧುನಿಕ ಕಾಲದವರೆಗೂ ಮಹಿಳೆಯನ್ನು ಒಂದಲ್ಲ ಒಂದು ರೀತಿ ಶೋಷಿಸುತ್ತ ಬಂದಿರುವ ಈ ಸಮಾಜ ಅವಳಿಗೆ ಗೌರವಾನ್ವಿತ ಸಮಾನತೆ ನೀಡುವುದಾದರೂ ಎಂದು ಎಂಬ ಪ್ರಶ್ನೆ ಎದುರು ನಿಲ್ಲುತ್ತದೆ. ಕಾಲಾನುಕಾಲದ ಗತಿಯಲ್ಲಿ ಮಹಿಳೆಯನ್ನು ಕೇವಲ ಭೋಗದ ವಸ್ತು, ಮಕ್ಕಳನ್ನು ಹೆರುವ ಯಂತ್ರವನ್ನಾಗಿ ಪರಿವರ್ತಿಸಲಾಗಿತ್ತು. ಹೀಗಾಗಿ ಅವಳ ಕನಸಿನ ಕುಸುಮಗಳು ಶತಶತಮಾನಗಳಿಂದ ಪ್ರತಿಫಲಿಸದೆ ಸುಟ್ಟು ಬೂದಿಯಾಗುತ್ತಿವೆ. ಹೀಗಾಗಿ ಮಹಿಳೆಯು ಸಂದಿಗ್ಧ ಬಿಕ್ಕಟ್ಟಿಗೆ, ಸಮಸ್ಯೆಗೆ, ಸಮಾಜದಲ್ಲಿನ ಅನೈತಿಕ ಆಚಾರಗಳ ಸವಾಲುಗಳಿಗೆ ಕ್ರೂರವಾಗಿ ಬಲಿಯಾಗಿದ್ದಾಳೆ.

ಈ ರೀತಿ ಇಂದು ಸಾಂಸ್ಕೃತಿಕವಾಗಿ, ಸಾಮಾಜಿಕವಾಗಿ, ಆರ್ಥಿಕವಾಗಿ, ಶೈಕ್ಷಣಿಕವಾಗಿ, ಧಾರ್ಮಿಕವಾಗಿ, ರಾಜಕೀಯವಾಗಿ, ಆಧ್ಯಾತ್ಮಿಕವಾಗಿ ಎಲ್ಲ ಕ್ಷೇತ್ರಗಳಲ್ಲಿಯೂ ಮಹಿಳೆ ತುಂಬಾ ಹಿಂದುಳಿಯುವಂತಾಗಿದೆ. ಈ ವಿಷಯ ಅಧ್ಯಯನಕಾರರಿಂದ ತುಂಬಾ ಗಂಭೀರವಾಗಿ ಚರ್ಚಿಸಲ್ಪಡತಕ್ಕದ್ದಾಗಿದೆ. ಇಂತಹ ನೂರಾರು ಸಮಸ್ಯೆಗಳನ್ನು ಎದುರಿಸುತ್ತಿರುವ ಗೊಲ್ಲ ಸಮುದಾಯದ ಮಹಿಳೆಯ ಬಗ್ಗೆ ಅಧ್ಯಯನ ಕೈಗೊಳ್ಳುವುದು ಅದಕ್ಕೆ ಪ್ರತಿಕ್ರಿಯೆ ನೀಡುವುದು ಸಮಾಜದ ಬುದ್ಧಿಜೀವಿಗಳ ಆದ್ಯ ಕರ್ತವ್ಯವಾಗಿದೆ.

ಕಾಡುಗೊಲ್ಲ ಜನಾಂಗದ ಮಹಿಳೆಯು ಶಿಕ್ಷಣದಿಂದ ವಂಚಿತಳಾಗಿದ್ದಾಳೆ. ಜೊತೆಗೆ ಅತ್ಯಂತ ನಿರ್ಲಕ್ಷತೆಗೆ ಒಳಗಾಗಿದ್ದಾಳೆ ಎಂದರೆ ತಪ್ಪಾಗಲಾರದು. ಶೇಕಡಾ ೫೦ ರಷ್ಟು ಮಹಿಳೆಯರು ಪ್ರೌಢಶಾಲೆಯ ಹಂತದಲ್ಲಿಯೇ ಶಾಲೆ ಬಿಟ್ಟವರಾಗಿದ್ದಾರೆ. ಇದಕ್ಕೆ ಮುಖ್ಯವಾದ ಕಾರಣವೆಂದರೆ ಕಿತ್ತು ತಿನ್ನುವ ಬಡತನ. ಎಲ್ಲಾ ರಂಗದಲ್ಲಿಯೂ ಹಿಂದುಳಿದಿರುವಿಕೆ, ಅಜ್ಞಾನ ಇವು ಈ ಸಮುದಾಯದ ಮಹಿಳೆಯನ್ನು ನಿರಕ್ಷರ ಕುಕ್ಷಿಯನ್ನಾಗಿ ಮಾಡಿದೆ.

ತಾನು ವಿದ್ಯಾಭ್ಯಾಸವನ್ನು ಮಾಡಬೇಕು ಎಂದು ತವ ತವಕಿಸುತ್ತಿದ್ದರೂ ಸಹ ಸಮುದಾಯ ಅವಳನ್ನು ಬಿಟ್ಟು ಕೊಡದೆ ಬಿಕ್ಕಟ್ಟಿನ ಪರಿಸ್ಥಿತಿಗೆ ನೂಕಿದೆ. ಇತ್ತ ಬಿಡಲು ಮನಸ್ಸಿನಲ್ಲ. ಓದಲು ಆಗದೆ ಸಂದಿಗ್ಧ ಪರಿಸ್ಥಿತಿಯನ್ನು ಎದುರಿಸುತ್ತಿದ್ದಾಳೆ. ಬಡತನ ಅವಳನ್ನು ಮನೆಯಲ್ಲಿನ ಕೆಲಸಕ್ಕಾಗಿ, ಮಕ್ಕಳ ಲಾಲನೆಪಾಲನೆ ಕಾರ್ಯಗೈಯುವಲ್ಲಿ ಬಳಸಿಕೊಳ್ಳುವುದರಿಂದ ಆಕೆಯ ಮನಸ್ಸಿನ ಸುಪ್ತ ಭಾವನೆಗಳು ಚಿಗುರೊಡೆಯುವುದಕ್ಕಿಂತ ಮುಂಚಿತವಾಗಿಯೇ ಬಾಡಿ ಕಮರಿಹೋಗುತ್ತಿವೆ. ಮುಖ್ಯವಾಗಿ ತಂದೆ ತಾಯಿಗಳಲ್ಲಿ ಶಿಕ್ಷಣದ ಬಗ್ಗೆ ಜ್ಞಾನವಿಲ್ಲದೆ ಅಜ್ಞಾನಿಗಳಾಗಿ ಚಿಕ್ಕ ವಯಸ್ಸಿನಲ್ಲಿಯೇ ಮದುವೆಯನ್ನು ಮಾಡಿ ಗಂಡನ ಮನೆಗೆ ದೂಡುವ ಈ ಪುರುಷ ವ್ಯವಸ್ಥೆ ಅವಳನ್ನು ಸರಪಳಿಗಳಿಂದ ಬಂಧಿಸಲ್ಪಟ್ಟಿದೆ.

### ೫.೧ ಸಾಂಸ್ಕೃತಿಕ ಮತ್ತು ಸಾಮಾಜಿಕ ಬಿಕ್ಕಟ್ಟುಗಳು

ಹೆಣ್ಣು ಬಾಲ್ಯದಲ್ಲಿ ಸಿದ್ಧಪಡಿಸಿದ ದುಡಿಮೆಗಾರ್ತಿಯಾಗಿರುವುದರಿಂದ ಪಾತ್ರೆ ತೊಳೆಯುವ, ಬಟ್ಟೆ ಒಗೆಯುವ, ಮನೆಯನ್ನು ಓರಣಮಾಡುವ, ನೀರು ಹೊರುವ, ಆಹಾರ ತಯಾರಿಸುವ ಜವಾಬ್ದಾರಿಗಳನ್ನು ಆಕೆಯ ಮೇಲೆ ಹೇರಿ ಆಕೆಯನ್ನು ಶಾಲೆಗೆ ಸೇರಲು ಅವಕಾಶಗಳನ್ನು ಕೊಡದೆ ಇರುವುದು ಕಂಡುಬರುತ್ತದೆ. ಇನ್ನು ಕೆಲವರು ಈ ಕಾಡುಗೊಲ್ಲ ಸಮುದಾಯದಲ್ಲಿ ಶಾಲೆಗೆ ಸೇರಿದ್ದವರನ್ನು ಬಿಡಿಸಿ ಮನೆಕೆಲಸಕ್ಕೆ, ಮಕ್ಕಳ ಲಾಲನೆ-ಪಾಲನೆಗೆ

ಹಚ್ಚುವರು. ಈ ಕಾರಣದಿಂದಲೇ ಈ ಸಮುದಾಯದ ಮಹಿಳೆ ಶಾಲೆಯನ್ನು ಮಧ್ಯದಲ್ಲಿಯೇ ಬಿಟ್ಟು ಬಾಲಕಾರ್ಮಿಕಳಾಗಿ ಶೈಕ್ಷಣಿಕ ಸಮಸ್ಯೆಯನ್ನು ಎದುರಿಸುತ್ತಿದ್ದಾಳೆ.

ಸಣ್ಣ ವಯಸ್ಸಿನಲ್ಲಿಯೇ ಹೆಣ್ಣು ಮಕ್ಕಳಿಗೆ ವಿವಾಹ ಮಾಡುವುದರಿಂದ ಅಂದರೆ ಇಲ್ಲಿ ಹೆಣ್ಣು ಮಗು ದೈಹಿಕವಾಗಿ, ಮಾನಸಿಕವಾಗಿ ವಿವಾಹ ಎನ್ನುವ ವ್ಯವಸ್ಥೆಯನ್ನು ಪ್ರವೇಶಿಸಲು ತಯಾರಿಲ್ಲದಿರುವಾಗಲೇ ಆಕೆಯನ್ನು ಶಿಕ್ಷಣದಿಂದ ದೂರ ಮಾಡಿ ವಿವಾಹವೆಂಬ ಬಂಧನದಲ್ಲಿ ಸಿಲುಕಿಸುವುದು, ಆಕೆಯ ಇಡೀ ಭವಿಷ್ಯವನ್ನು ಕುಂಠಿತಗೊಳಿಸಿದಂತಾಗುತ್ತದೆ. ಈ ಒಂದು ಕಾರಣವೂ ಸಹ ಕಾಡುಗೊಲ್ಲ ಮಹಿಳೆಯ ಶೈಕ್ಷಣಿಕ ಸಮಸ್ಯೆಯಾಗಿದೆ. ಹೆಣ್ಣು ಮಕ್ಕಳನ್ನು ವಿವಾಹ ಮಾಡದೆ ಮನೆಯಲ್ಲಿ ಉಳಿಸಿಕೊಂಡರೆ ಅವರು ಅಡ್ಡದಾರಿ ಹಿಡಿಯಬಹುದು, ಅಥವಾ ಕೌಮಾರ್ಯದ ದುರುಪಯೋಗ ಪಡಿಸಿಕೊಳ್ಳಬಹುದು ಎನ್ನುವರು.

ಸ್ಥಳೀಯವಾಗಿ ಶಾಲೆಗಳಿದ್ದಾಗ್ಯೂ ಓದಿಸುವುದು ಕಷ್ಟ ಎಂದ ಮೇಲೆ ಬೇರೆ ಊರುಗಳಲ್ಲಿರುವ ಶಾಲೆಗಳಿಗೆ ಕಳುಹಿಸಲು ಒಪ್ಪದೇ ಇರುವುದು, ಜೊತೆಗೆ ಲಿಂಗ ತಾರತಮ್ಯತೆಯ ನೀತಿಯಿಂದ ಹೆಣ್ಣಿಗೆ ಶಿಕ್ಷಣವೇಕೆ ಮನೆಯಲ್ಲಿಯ ಕೆಲಸ ಮಾಡಿಕೊಂಡಿದ್ದರೆ ಸಾಕು ಎಂದು ಬೇರೆ ಊರಿಗೆ ಶಿಕ್ಷಣಕ್ಕೆ ಕಳಿಸುವುದಿಲ್ಲ.

ಹಾಗೆಯೇ ಈ ಸಮುದಾಯದಲ್ಲಿ ಉನ್ನತ ಶಿಕ್ಷಣ ಪಡೆದ ಮಹಿಳೆ ಸಿಗುವುದು ತುಂಬಾ ವಿರಳ. ಈ ಸಮುದಾಯದವರ ಮೌಢ್ಯ ಸಂಪ್ರದಾಯಗಳಾದ ಪ್ರಕೃತಿ ದತ್ತವಾಗಿ ಋತುಮತಿಯಾದ ಹೆಣ್ಣನ್ನು ಪ್ರೌಢಶಾಲೆಯಲ್ಲಿಯೇ ಶಾಲೆ ಬಿಡಿಸುವುದರಿಂದ ಇನ್ನು ಉನ್ನತ ಶಿಕ್ಷಣವು ಈ ಸಮುದಾಯದ ಮಹಿಳೆಗೆ ಗಗನ ಕುಸುಮವೇ ಸರಿ. ಇಂದಿನ ದಿನಗಳಲ್ಲಿ ಸಿಕ್ಕರೂ ಅದು ಸರ್ಕಾರಿ ಉದ್ಯೋಗಸ್ಥರ ಮಕ್ಕಳಾಗಿರುತ್ತಾರೆಯೇ ಹೊರತು ಗ್ರಾಮೀಣ ಪ್ರದೇಶದ ಕಾಡುಗೊಲ್ಲ ಮಹಿಳೆಯಂತೂ ಅಲ್ಲವೇ ಅಲ್ಲವಾಗಿದೆ. ಸಂಕೋಚ ಮತ್ತು ಸಂಕುಚಿತ ಮನೋಭಾವದಿಂದಲೇ ಇಂದು ಈ ಸಮುದಾಯದ ಮಹಿಳೆ ಶಿಕ್ಷಣವನ್ನು ಪಡೆಯಲಾಗುತ್ತಿಲ್ಲ ಎಂದು ಹೇಳಬಹುದು. ಅಂದರೆ ಇಲ್ಲಿ ಹೆಣ್ಣು ಮಗು ಶಾಲೆಗೆ ಹೋದಾಗ ಅದು ಇತರ ಸಮುದಾಯದ ಮಕ್ಕಳ ಜೊತೆಯಲ್ಲಿ ಬೆರೆಯದೇ ಇರುವುದು, ಇನ್ನು ಸ್ವಲ್ಪ ವಯಸ್ಕಳಾದಾಗ ಶಾಲೆಗೆ ಹೋಗುವುದರಿಂದ ಅವಳು ಶಾಲೆಯನ್ನು ಕಲಿಯದೇ ದನಕಾಯಲು, ಕುರಿಕಾಯಲು ಹೊಲದ ಕೆಲಸಗಳಿಗೆ ಸೇರುವುದರಿಂದ ಈ ಸಮುದಾಯದ ಗೊಲ್ಲಮಹಿಳೆ ಶೈಕ್ಷಣಿಕ ಬಿಕ್ಕಟ್ಟನ್ನು ಎದುರಿಸುತ್ತಿದ್ದಾಳೆ.

ಕಾಡುಗೊಲ್ಲ ಸಮುದಾಯದ ಮಹಿಳೆಯ ಮೇಲೆ ಹೇರಿದಷ್ಟು ಕಟಿಬದ್ಧ ಸಂಪ್ರದಾಯಗಳು ಬೇರೆ ಯಾವ ಬುಡಕಟ್ಟಿನಲ್ಲಿಯೂ ಇಲ್ಲವೆನ್ನಬಹುದು. ಏಕೆಂದರೆ ಅವಳ ಜೀವನದ ಪ್ರತಿ ಹೆಜ್ಜೆ ಹೆಜ್ಜೆಗೂ ಸಂಪ್ರದಾಯ ಅವಳನ್ನು ಬಂಧಿಸುತ್ತದೆ. ಅಂದರೆ ಈ ಸಮುದಾಯದಲ್ಲಿ ಮಹಿಳೆ ರವಿಕೆ ರಹಿತವಾಗಿರುವುದನ್ನು ಹಿಂದಿನಿಂದಲೂ ಅನುಸರಿಸಿಕೊಂಡು ಬಂದಿರುವ ಪದ್ಧತಿಯಾಗಿದೆ. ಇಂದಿನ ಆಧುನಿಕ ಜಗತ್ತಿನಲ್ಲಿ ಮಹಿಳೆ ರವಿಕೆ ರಹಿತವಾಗಿದ್ದು ಅನೇಕ ರೀತಿಯ ಮಾನಾಪಮಾನಕ್ಕೆ ಗುರಿಯಾಗಿ ದುಸ್ತರವಾದ ಬದುಕನ್ನು ಸವೆಸುತ್ತಿದ್ದಾಳೆ. ಪ್ರತಿಯೊಂದು ಸಂದರ್ಭದಲ್ಲಿಯೂ ಸಮಾಜ ಅವಳನ್ನು ನೋಡುವ ನೋಟ ವಿಲಕ್ಷಣವಾಗಿದೆ. ಅಷ್ಟಲ್ಲದೆ ಕಾಡುಗೊಲ್ಲರು ವಾಸಿಸುವ ಪ್ರದೇಶಗಳಲ್ಲಿ ಉಂಟಾಗುವ ಬಿಸಿಲು, ಬರಗಾಲ, ಅತಿವೃಷ್ಟಿ ಮತ್ತು ಅನಾವೃಷ್ಟಿಗಳಿಂದ ತಮ್ಮ ಮೂಲ ವೃತ್ತಿಯಾದ ಬೇಟೆ ಮತ್ತು ಪಶುಪಾಲನೆಯಲ್ಲಿ ವ್ಯತ್ಯಯವಾಗುವುದು ಸಹಜವಾಗಿ ಕುಟುಂಬದ ಮೇಲೆ ಪರಿಣಾಮ ಬೀರುತ್ತದೆ. ಇಂತಹ ಪರಿಣಾಮವು ನೇರವಾಗಿ ಕುಟುಂಬದ ಕೇಂದ್ರವಾದ ಸ್ತ್ರೀಯ ಮೇಲೆ ಬಿದ್ದೇ ಬೀಳುತ್ತದೆ. ಅವಳ ಜವಾಬ್ದಾರಿ ಹೆಚ್ಚುತ್ತದೆ. ಇವರು ವಾಸಿಸುವ ಪ್ರದೇಶಗಳಲ್ಲಿನ ಕೃಷಿಯು ಮಳೆಯಾಧರಿತ ಕೃಷಿಪದ್ಧತಿಯಾಗಿದ್ದು ಅಲ್ಲಿ ಕೃಷಿಕೂಲಿಗೆ ಅಂತಹ ಮಹತ್ವವೇನೂ ಇಲ್ಲ. ಅಲ್ಲದೆ ಕೃಷಿ ಕೂಲಿ ದೊರೆಯುವ ಸಂದರ್ಭದಲ್ಲಿ ಪೈಪೋಟಿ ಹೆಚ್ಚಿರುವುದರಿಂದ ಕೂಲಿಯ ಮೊತ್ತವೂ ಕಡಿಮೆಯಾಗಿರುತ್ತದೆ. ಇತ್ತ ಮನೆಯ ದೈನಂದಿನ ಕೆಲಸ ಕಾರ್ಯಗಳನ್ನು ನಿರ್ವಹಿಸುವುದು ಅತ್ತ ಹೊಲಗಳಲ್ಲಿ ಕೂಲಿಯಾಗಿ ದುಡಿದು ಸಂಸಾರ ನಿಭಾಯಿಸುವಲ್ಲಿ ಕಾಡುಗೊಲ್ಲ ಮಹಿಳೆ ಹೈರಾಣವಾಗಿರುತ್ತಾಳೆ.

ಇತ್ತ ಪೂರ್ತಿ ನಾಗರಿಕ ಜಗತ್ತೂ ಅಲ್ಲದ ಅತ್ತ ಪೂರ್ತಿ ಕಾಡಿನ ಜೀವನವೂ ಅಲ್ಲದ ಸ್ಥಿತ್ಯಂತರ ಸ್ಥಿತಿಯಲ್ಲಿರುವ ಕಾಡುಗೊಲ್ಲ ಸಮಾಜದ ಮಹಿಳೆಯು ಹಲವಾರು ತಲ್ಲಣಗಳನ್ನು ಎದುರಿಸುತ್ತಿದ್ದಾಳೆ. ಆ ತಲ್ಲಣಗಳು ಹೊರಗಿನ

ತಮ್ಮದಲ್ಲದ ಬೇರೆ ಬಗೆಯ, ಭಿನ್ನ ಬಗೆಯ ಜೀವನ ವಿಧಾನದಿಂದ ಹೇರಲ್ಪಟ್ಟ ಅಂಶಗಳಾಗಿರಬಹುದು. ಅಥವಾ ನಂಬಿಕೆ ಮೌಲ್ಯಗಳಾಗಿರಬಹುದು. ಒಂದರ್ಥದಲ್ಲಿ ಮಾತೃಮೂಲೀಯವಾಗಿದ್ದ ಕಾಡುಗೊಲ್ಲ ಸಮುದಾಯವು ತನ್ನನ್ನು ಪರಿವರ್ತನೆಗೆ ತೆರೆದುಕೊಂಡಾಗ ಅದು ಗೊಲ್ಲ ಮಹಿಳೆಯ ಮೇಲೆ ಆಘಾತಕಾರಿ ಪರಿಣಾಮವನ್ನುಂಟು ಮಾಡುತ್ತದೆ. ಇಲ್ಲಿ ಈ ಮಹಿಳೆ ಸಹಜವಾಗಿ ಹೊಸತೊಂದು ಜೀವನ ವಿಧಾನಕ್ಕೆ, ನಂಬಿಕೆಗಳಿಗೆ, ಆಧುನಿಕ ಬದುಕಿನ ರೀತಿ ನೀತಿಗಳಿಗೆ ಒಗ್ಗಿಕೊಳ್ಳುವಾಗ ಹೊಸ ಬಿಕ್ಕಟ್ಟುಗಳನ್ನು ಎದುರಿಸಬೇಕಾಗುತ್ತದೆ. ಇದು ಅವಳ ಉಡುಗೆ-ತೊಡುಗೆ, ಭಾಷೆ, ಆಹಾರ ಪದ್ಧತಿ, ಸಾಮಾಜಿಕ ಸಂಬಂಧಗಳ ಸ್ವರೂಪವನ್ನು ನಿರ್ಧರಿಸುತ್ತದೆ.

ಕಾಡುಗೊಲ್ಲ ಸಮುದಾಯದವರು ಸಂಪ್ರದಾಯ ಶರಣರಾಗಿದ್ದಾರೆ. ಇದರಲ್ಲಿ ಮಹಿಳೆ ಹಲವಾರು ರೀತಿಯ ಸಾಮಾಜಿಕ ಬಿಕ್ಕಟ್ಟುಗಳನ್ನು ಎದುರಿಸುತ್ತಿದ್ದಾಳೆ. ಸಂಪ್ರದಾಯದ ಕಣ್ಮರೆಯಲ್ಲಿ, ವ್ಯವಸಾಯದ ವೃತ್ತಿಯಲ್ಲಿ ಬದಲಾವಣೆಯಾಗಿ ಸಾಮಾಜಿಕ ಅಸಮಾನತೆ, ದೌರ್ಜನ್ಯ, ಲಿಂಗತಾರತಮ್ಯ, ವೈಮನಸ್ಸು, ಒಳಜಗಳಗಳು ಮೊದಲಾದ ಬಿಕ್ಕಟ್ಟುಗಳು ಈ ಸಮುದಾಯದ ಮಹಿಳೆಯ ಮೇಲೆ ಅತ್ಯಂತ ಗಂಭೀರವಾದ ಪರಿಣಾಮಗಳನ್ನುಂಟು ಮಾಡುತ್ತಿವೆ. ಗೊಲ್ಲ ಮಹಿಳೆಯು ಅತ್ಯಂತ ಮುಗ್ಧಳು, ಸಂಪ್ರದಾಯ ಸಂಕುಚಿತ ಮನೋಭಾವದವಳಾಗಿದ್ದಾಳೆ. ಈ ಕಾಡುಗೊಲ್ಲ ಸಮುದಾಯ ನಾಗರಿಕ ಪ್ರಪಂಚದಿಂದ ಬಹುದೂರ ಪ್ರತ್ಯೇಕ ಹಟ್ಟಿಕಟ್ಟಿಕೊಂಡು ಹಟ್ಟಿಯ ಸುತ್ತ ಮುಳ್ಳು ಬೇಲಿ ಹಾಕಿ ಒಂದು ಅಥವಾ ಎರಡು ಹತ್ತಿರ ಮಾತ್ರ 'ಹಟ್ಟಿ ಹುದಿ' ಅಥವಾ 'ಹೊಳೆ ಬಾಗಿಲು' ಬಿಟ್ಟಿರುತ್ತಾರೆ. ಇದೇ ರೀತಿಯಲ್ಲಿ ತನ್ನ ಹಟ್ಟಿಯ ಮಧ್ಯೆ ದೇವಸ್ಥಾನ ಅದರ ಸುತ್ತಲೂ ಹುಲ್ಲು ಗುಡಿಸಲು ಕಟ್ಟಿಕೊಂಡಿರುತ್ತಾರೆ. ಇಡೀ ಮಾನವ ಕುಲ ವಿಸ್ಮಯ ಪಡುವಂತಹ ಕಟ್ಟು ಪಾಡುಗಳು ಮತ್ತು ಸಂಪ್ರದಾಯಗಳು ಇವೆ. ಆದರೆ ಇವು ಕಣ್ಮರೆಯಾಗುತ್ತಿವೆ. ಏಕೆಂದರೆ ಇಂದು ಇವರು ಆಚರಿಸುತ್ತಿರುವ ಸಂಪ್ರದಾಯಗಳಲ್ಲಿ ಸಡಲಿಕೆ ಉಂಟಾಗಿ ಎಡಗೈ ಪಂಥದವರು, ಮುಸಲ್ಮಾನರು, ಕೋಳಿಗಳು ಎಲ್ಲವೂ ತಮ್ಮ ಹಟ್ಟಿಯನ್ನು ಪ್ರವೇಶಿಸಿ ಸಂಪ್ರದಾಯವನ್ನು ಮುರಿದಿವೆ.

ಮಣ್ಣಿನ ಮಡಿಕೆ ಕುಡಿಕೆಗಳನ್ನೇ ಹೆಚ್ಚಾಗಿ ಮನೆಯಲ್ಲಿ ಅಡಿಗೆಗೆ ಬಳಸುತ್ತಿದ್ದರು. ಹಾಲು, ಮೊಸರು, ತುಪ್ಪಗಳನ್ನು ಹಗ್ಗದ ನೆಲ್ಲೇವುಗಳಲ್ಲಿಡುವುದು, ದವಸ ಧಾನ್ಯಗಳನ್ನು ಪಗೇವು ಮತ್ತು ವಾಡೇವುಗಳಲ್ಲಿ ಸಂಗ್ರಹಿಸಿಡುತ್ತಿದ್ದರು. ಬಿತ್ತನೆ ಮತ್ತು ಬೆಲೆ ಬಾಳುವ ವಸ್ತುಗಳನ್ನು ಮಣ್ಣಿನ ಕುಡಿಕೆಯ ಸೋರೆ ಅಥವಾ ಬಾನೆಗಳಲ್ಲಿಟ್ಟು ಒಂದರ ಮೇಲೊಂದರಂತೆ ಏರಿಸುತ್ತಾರೆ. ಇವಕ್ಕೆ 'ಅಕ್ಕಲು ಗಡಿಗೆ' ಎಂದು ಕರೆಯುತ್ತಾರೆ. ಆದರೆ ಇಂದು ಇವು ಕಣ್ಮರೆಯಾಗುತ್ತಿವೆ. ಕಾರಣ ಇಂದಿನ ಜಾಗತಿಕ ಸಂದರ್ಭವೇ ಆಗಿದೆ. ಇಂದು ಮಣ್ಣಿನ ಕುಡಿಕೆಗಳಿಗೆ ಬದಲಾಗಿ ಸಿಲ್ವರ್ ಮತ್ತು ಸ್ಟೀಲ್ ಪಾತ್ರೆಗಳು, ಪ್ಲಾಸ್ಟಿಕ್ ಬಳಕೆಯಿಂದ ಹಾಲು, ತುಪ್ಪ, ಮೊಸರಿನ ಸಂಗ್ರಹಕ್ಕೆ ನೆಲುವು ಹೋಗಿವೆ. ಕಾಡುಗೊಲ್ಲರ ಮನೆಯ ಲಕ್ಷಣವನ್ನು ಕಾಪಾಡುವ ಈ ಕರಬಾನುಗಳು ಕಣ್ಮರೆಯಿಂದ ಕಾಡುಗೊಲ್ಲ ಸಮುದಾಯದ ಮಹಿಳೆ ತನ್ನ ಪಾರಂಪರಿಕ ಚಹರೆಯನ್ನೂ ಸಹ ಕಳೆದುಕೊಳ್ಳುತ್ತಿದ್ದಾಳೆ.

ಕಾಡುಗೊಲ್ಲ ಮಹಿಳೆಯರಲ್ಲಿ ಅದೂ ಅವಿಭಕ್ತ ಕುಟುಂಬ ಪದ್ಧತಿಯಲ್ಲಿ ಅತಿ ಹೆಚ್ಚಿನ ರೀತಿಯ ವೈಮನಸ್ಸುಗಳಿರುತ್ತವೆ. ಇಲ್ಲಿ ಯಾರೊಬ್ಬರೂ ತಮ್ಮ ತಮ್ಮ ಕಾರ್ಯಗಳನ್ನು ಸ್ವಯಂಸ್ಫೂರ್ತಿಯಿಂದ ಮಾಡುವುದಿಲ್ಲ. ಇದನ್ನು ಹೆಚ್ಚಾಗಿ ಮಹಿಳೆಯರಲ್ಲಿ ಕಾಣಬಹುದು. ಈ ರೀತಿಯ ಒಳ ವೈಮನಸ್ಸುಗಳಿಂದ ಕೌಟುಂಬಿಕ ಬಿಕ್ಕಟ್ಟುಗಳು ಎದುರಾಗುತ್ತವೆ. ಅವಿಭಕ್ತ ಕುಟುಂಬಗಳು ಒಡೆದು ಹೋಳಾಗುತ್ತವೆ. ಎಲ್ಲರೂ ಕೂಡಿ ಇದ್ದಾಗ ಸಿಗುತ್ತಿದ್ದ ಸಾಮಾಜಿಕ ರಕ್ಷಣೆಯು ಇದರಿಂದ ಕಡಿಮೆಯಾಗುತ್ತದೆ. ದುರ್ಬಲಗೊಂಡ ಕುಟಂಬದ ಮೇಲೆ ಇತರೆ ಸಮುದಾಯಗಳ ಆಕ್ರಮಣ ಹೆಚ್ಚುತ್ತದೆ. ಇಂತಹುದೊಂದು ಸ್ಥಿತಿಗೆ ಮಹಿಳೆಯೇ ಕಾರಣವೆಂಬುದಾಗಿ ಕಾಡುಗೊಲ್ಲ ಪುರುಷರ ಆರೋಪಣೆ. ಇದು ಆಲೋಚಿಸತಕ್ಕ ವಿಷಯವಾಗಿದೆ. ಇಂತಹ ಬಿಕ್ಕಟ್ಟುಗಳು ಕೇವಲ ಕಾಡುಗೊಲ್ಲರಿಗಷ್ಟೆ ಸೀಮಿತವಾಗಿರದೆ ಎಲ್ಲ ಸಮುದಾಯದ ಅವಿಭಕ್ತ ಕುಟುಂಬಗಳಿಗೂ ಅನ್ವಯಿಸುತ್ತದೆ. ಇಲ್ಲಿ ಮಹಿಳೆ ಈ ರೀತಿಯ ಬಿಕ್ಕಟ್ಟುಗಳಿಗೆ ಎಷ್ಟರ ಮಟ್ಟಿಗೆ ಕಾರಣಳೆಂಬುದು ವಿಶ್ಲೇಷಣಾರ್ಹ ಸಂಗತಿಯಾಗಿದೆ. ಬಹುಶಃ ಮಹಿಳೆಗಿರುವ ತನ್ನ ಸಂತಾನ ಮತ್ತು ತಾನು ತನ್ನ ಗಂಡ ಮಕ್ಕಳಷ್ಟೇ ಚೆನ್ನಾಗಿರಬೇಕೆಂಬ ಸಂಕುಚಿತ ಮನಸ್ಥಿತಿಯೇ ಇದಕ್ಕೆ ಕಾರಣವಾಗಿರಬಹುದೆನಿಸುತ್ತದೆ.

ನಂತರ ಮುಖ್ಯವಾಗಿ ಗಮನಿಸಬೇಕಾದುದು ಕಾಡುಗೊಲ್ಲ ಮಹಿಳೆಯ ಆರೋಗ್ಯ ಸಂಬಂಧಿ ವಿಚಾರವಾಗಿದೆ. ಇವಳ ಹಟ್ಟಿಯ ಸುತ್ತಮುತ್ತಲಿನ ಪರಿಸರವು ಸ್ವಚ್ಛವಾಗಿರದೆ ಮನೆಯ ಪಕ್ಕದಲ್ಲಿಯೇ ದನಕರುಗಳನ್ನು ಕಟ್ಟಿಕೊಳ್ಳುವುದರಿಂದ ಅಶುಚಿಯ ವಾತಾವರಣವಿರುತ್ತದೆ. ವಾಸ ಸ್ಥಳದ ಪಕ್ಕದಲ್ಲಿಯೇ ಮಲ, ಮೂತ್ರ ವಿಸರ್ಜನೆಯಿಂದಾಗಿಯೂ ಈ ಸಮಸ್ಯೆ ಉಂಟಾಗುತ್ತದೆ. ವ್ಯವಸ್ಥಿತವಾದ ಚರಂಡಿಯೂ ಇರುವುದಿಲ್ಲ. ಇದರಿಂದ ಮಹಿಳೆಯು ಅನೇಕ ಕಾಯಿಲೆಗಳಿಗೆ ತುತ್ತಾಗುತ್ತಾಳೆ. ಇದಲ್ಲದೆ ಹಟ್ಟಿಯಲ್ಲಿ ಅಡುಗೆಗಾಗಿ ಉರಿಸಿದ ಉರುವಲಿನ ಹೊಗೆಯಿಂದಲೂ ಅವಳ ಕಣ್ಣುಗಳು ಹಾಳಾಗುತ್ತವೆ. ಅಲ್ಲದೆ ವ್ಯವಸ್ಥಿತವಾದ ಆರೋಗ್ಯ ಕೇಂದ್ರಗಳು ಇಲ್ಲದಿರುವುದೂ ಸಹ ಒಂದು ಸಮಸ್ಯೆಯಾಗಿ ಕಾಡುತ್ತದೆ.

ನಾಗರಿಕ ಸಂಪರ್ಕದಿಂದಾಗಿ ಈ ಸಮುದಾಯದ ಪುರುಷರು ಮದ್ಯಪಾನ ಮತ್ತು ಧೂಮಪಾನದಂತ ದುರ್ಚಟಗಳಿಗೆ ಬಲಿಯಾಗುತ್ತಿದ್ದಾರೆ. ಇದರಿಂದುಂಟಾಗುವ ಹೆಚ್ಚಿನ ಆರ್ಥಿಕ ಹೊರೆ ಮಹಿಳೆಯನ್ನು, ಕುಟುಂಬವನ್ನೂ ಪ್ರಭಾವಿಸುತ್ತದೆ. ಪಶುಪಾಲನೆಯನ್ನು ಮೂಲ ವೃತ್ತಿಯಾಗುಳ್ಳ ಈ ಸಮುದಾಯದ ಮಹಿಳೆಯರು ಹಾಲು, ಮೊಸರು, ಮಜ್ಜಿಗೆ, ಬೆಣ್ಣೆ, ತುಪ್ಪ ಮೊದಲಾದವುಗಳನ್ನು ಪಟ್ಟಣಕ್ಕೆ ಹೊಯ್ದು ಮಾರಿ ಕುಟುಂಬ ನಿರ್ವಹಣೆ ಮಾಡುತ್ತಿದ್ದಾಳೆ. ಆದರೆ ಇವನ್ನು ತಾನು, ತನ್ನ ಕುಟುಂಬದ ಸದಸ್ಯರು, ಮಕ್ಕಳು ಮರಿ ಉಂಡರೆ ಆದಾಯಕ್ಕೆಲ್ಲಿ ಕಲ್ಲು ಬೀಳುತ್ತದೆಯೊ ಎಂದು ಹೆದರಿ ಅದನ್ನೂ ಸಹ ನಿರ್ಬಂಧಿಸಲಾಗುತ್ತದೆ.

ಈ ಸಮುದಾಯದ ಮಹಿಳೆಯನ್ನು ಪಾರಂಪರಿಕ ವಿಧಿನಿಷೇಧಗಳು ಸಹ ಪೆಡಂಭೂತದಂತೆ ಬೆನ್ನಟ್ಟಿವೆ. ಹೆರಿಗೆ ಸಂದರ್ಭದಲ್ಲಿ ಹಟ್ಟಿಯ ಹೊರಗೆ 'ಹೆರಿಗೆ ಗುಡ್ಲು' ಕಟ್ಟಿ ಹೆರಿಗೆ ಮಾಡಿಸುವುದು, ಋತುಮತಿಯಾದ ಹೆಣ್ಣನ್ನು ಕೂಡ ಹಟ್ಟಿಯ ಹೊರಗೆ ಇಟ್ಟು ಅವಳನ್ನು ಅಮಾನವೀಯವಾಗಿ ಕಾಣುವುದು, ಇದಕ್ಕೆ ಹುಟ್ಟು ಮತ್ತು ಸಾವುಗಳ ಸೂತಕವೆಂದು ಅರ್ಥೈಸುವುದು ದಾರುಣವಾದ ಸಂಗತಿಯಾಗಿದೆ. ಹೀಗಾಗಿ ಸಂಪ್ರದಾಯಸ್ಥ ಕಾಡುಗೊಲ್ಲ ಮಹಿಳೆ ಎದುರಿಸುವ ಸಂದಿಗ್ಧ ಸ್ಥಿತಿ ಇದಾಗಿದೆ.

ಹೀಗೆ ಕಾಡುಗೊಲ್ಲ ಮಹಿಳೆಯು ಎದುರಿಸುವ ಸಾಂಸ್ಕೃತಿಕ ಬಿಕ್ಕಟ್ಟುಗಳು ಜಾನಪದೀಯ ಅಧ್ಯಯನಕ್ಕೆ ವಸ್ತುವಾಗುವಂತೆ ಸಮಾಜಶಾಸ್ತ್ರೀಯ ಅರ್ಥೈಕೆಗಳಿಗೂ, ವಿಶ್ಲೇಷಣೆಗಳಿಗೂ ಒಳಪಡುವ ಅಗತ್ಯವಿದೆ. ಅಂತೆಯೇ ಸ್ತ್ರೀವಾದಿ ನೆಲೆಯಲ್ಲಿ ವ್ಯಾಖ್ಯಾನಿಸಬೇಕಾದ ತುರ್ತು ಸಹ ಇದೆ.

**೫.೨ ಕಾಡುಗೊಲ್ಲ ಮಹಿಳೆ ಮತ್ತು ಆಧುನಿಕತೆಯ ಸವಾಲುಗಳು**

ಪುರುಷ ಪ್ರಧಾನವಾದಂತಹ ಕಾಡುಗೊಲ್ಲ ಸಮುದಾಯದಲ್ಲಿ ಪುರುಷನಿಂದ ಮಹಿಳೆ ಶೋಷಣೆಗೆ ಒಳಗಾಗಿದ್ದಾಳೆ. ಇಲ್ಲಿ ಹೆಣ್ಣಿನ ನಾಶದ ಪ್ರಮಾಣ ಎಷ್ಟರ ಮಟ್ಟಿಗೆ ಇದೆ ಎಂಬುದು ನಮಗೆ ವೇದ್ಯವಾಗುತ್ತದೆ. ಅಂಗೀಕರಣ ಪ್ರವೃತ್ತಿಗಳು ಕುಟುಂಬದೊಳಗೆ ಆರಂಭವಾಗುತ್ತವೆ. ಮತ್ತು ಸಾಮಾಜಿಕ ಸಂರಚನೆಯಲ್ಲಿ ಮುಂದುವರೆಯುತ್ತವೆ. ಇಲ್ಲಿ ಹೆಣ್ಣನ್ನು ಮುಟ್ಟಲು ಬಿಡದ ಲಿಂಗ ವ್ಯವಸ್ಥೆಯ ಕ್ರೌರ್ಯ ಹುಟ್ಟಿದ ಹೆಣ್ಣನ್ನು ಬದುಕಲು ಬಿಟ್ಟಿಲ್ಲ. ಗಂಡು ಶ್ರೇಷ್ಠ, ಹೆಣ್ಣು ಕನಿಷ್ಟ ಎಂಬ ತಾರತಮ್ಯವಿದೆ. ಮನುಷ್ಯನ ಮೂಲಭೂತ ಅಗತ್ಯೆಗಳಾದ ಆಹಾರ, ಆರೋಗ್ಯ, ಶಿಕ್ಷಣ, ಬಟ್ಟೆಗಳ ಒದಗುವಿಕೆಯಲ್ಲಿ ಕಾಣುತ್ತದೆ. ಕುಟುಂಬದೊಳಗಿರುವ ಈ ಲಿಂಗ ಬೇಧ ತಾರತಮ್ಯ ಪ್ರಕ್ರಿಯೆ ಯಾವ ರೀತಿಯಲ್ಲಿರುತ್ತದೆಯೆಂದರೆ ಮಹಿಳೆ ಹೇಗಿರಬೇಕೋ, ಹೇಗಿರಬಾರದೋ, ಎಲ್ಲಿ ಇರಬೇಕೋ ಎಲ್ಲಿ ಬಾರದೋ, ಯಾರೊಡನೆ ಮಾತನಾಡಬೇಕೋ ಮಾತನಾಡಬಾರದೋ, ಯಾವ ಕೆಲಸ ಮಾಡಬೇಕೋ ಮಾಡಬಾರದೋ, ಯಾವ ಮಗುವನ್ನು ಹೆರಬೇಕೋ ಹೆರಬಾರದೋ ಮತ್ತು ಎಷ್ಟು ಮಕ್ಕಳನ್ನು ಹೆರಬೇಕು ಮತ್ತು ಹೆರಬಾರದು ಎನ್ನುವ ಆಯ್ಕೆ ಇಲ್ಲದ ಸ್ಥಿತಿಗೆ ಅವಳನ್ನು ದೂಡಿದ್ದಾರೆ. ತನ್ನ ಬದುಕು ಹಾಗೂ ಹಕ್ಕುಗಳ ಬಗ್ಗೆ ಪೂರ್ಣ ಕುರುಡಾಗಿರುವ ಹೆಣ್ಣು ಪ್ರಶ್ನಿಸುವ ಪ್ರಜ್ಞೆ ಹಾಗೂ ಪ್ರತಿಭಟಿಸುವ ಧೈರ್ಯ ಎರಡನ್ನೂ ಕಳೆದುಕೊಂಡಿದ್ದಾಳೆ. ಹೆಣ್ಣಿನ ಹುಟ್ಟು, ಬದುಕು, ದೇಹ, ಮನಸ್ಸು, ಎಲ್ಲವೂ ಗಂಡಿಗಾಗಿ ಎನ್ನುವ ಪುರಷ ಪ್ರಧಾನ ವ್ಯವಸ್ಥೆಯ ಪ್ರವೃತ್ತಿಗಳೇ ಗಂಡಿನ ದೌರ್ಜನ್ಯ, ಹೆಣ್ಣಿನ ನಾಶವನ್ನು ನಿರಾತಂಕವಾಗಿ ಸಾಗುವಂತೆ ಮಾಡಿದೆ.

ಆಧುನಿಕ ಮಹಿಳೆ ಪುರುಷನಿಗೆ ಸರಿಸಮಾನವಾಗಿ ಎಲ್ಲಾ ಕ್ಷೇತ್ರವನ್ನು ಪ್ರವೇಶ ಮಾಡಿದ್ದಾಳೆ ಎಂದು ಅತ್ಯುತ್ಸಾಹದಿಂದ ನಮ್ಮ ಬಾಯಿ ಮುಚ್ಚಿಸುತ್ತಾರೆ. ಆದರೆ ಇಂದು ಸಮಾಜದಲ್ಲಿ ಹೆಣ್ಣಿನ ಮೇಲೆ ನಡೆಯುತ್ತಿರುವ ಹಲ್ಲೆ, ಕ್ರೌರ್ಯಗಳಿಗೆ ಎಣೆಯಿಲ್ಲದಂತಾಗಿದೆ. ಪ್ರತಿ ಗಂಟೆಗೆ ಭ್ರೂಣ ಹತ್ಯೆಗೆ ಒಳಗಾಗುವ ಹೆಣ್ಣು ಜೀವಗಳ ಸಂಖ್ಯೆ ಅಥವಾ ವರದಕ್ಷಿಣೆ ನೆಪದಲ್ಲಿ ಸುಟ್ಟು ಕರಕಲಾಗಿರುವ ಸೊಸೆಯಂದಿರ ಸಾವಿಗೆ, ಕೌಟುಂಬಿಕ ಹಿಂಸೆಗೆ ಒಳಗಾಗುವ ಹೆಣ್ಣು ದೇಹಗಳ ಲೆಕ್ಕಕ್ಕೆ ಯಾವ ರೀತಿಯಲ್ಲಿ ಸಮರ್ಥನೆಯನ್ನು ನೀಡಬೇಕೋ ಪುರುಷ ಜಗತ್ತಿಗೆ ಬಿಟ್ಟ ವಿಚಾರವಾಗಿದೆ.

ಆಧುನಿಕತೆಯ ಪ್ರಗತಿ, ವೈಜ್ಞಾನಿಕ ಕ್ರಾಂತಿ ಇತ್ಯಾದಿ ಅಂಶಗಳೆಲ್ಲವೂ ಹೇಗೆ ಮಹಿಳೆಯರ ಸಂದರ್ಭದಲ್ಲಿ ಶಾಪವಾಗಿ ಪರಿಣಮಿಸುತ್ತವೆ, ಹುಟ್ಟಿದ ಮಗುವನ್ನು ಕುಟುಂಬವೇ ಹತ್ಯೆಗೈಯುವ ಬರ್ಬರತೆ ಹಾಗೂ ಹುಟ್ಟುವ ಮೊದಲೇ ಲಿಂಗ ಪರೀಕ್ಷೆಗೆ ಒಳಪಡಿಸಿ ನಾಶಪಡಿಸುತ್ತಾರೆ. ಹೆಣ್ಣು ಮಗು ಹುಟ್ಟಿದರೆ ಅವಳಿಂದ ಏನೂ ಲಾಭವಿಲ್ಲವೆಂದು ಹುಟ್ಟಿದ ಹೆಣ್ಣನ್ನು ಬದುಕಲು ಬಿಡದ ಪುರುಷಶಾಹಿ ಸಮಾಜ ಹೆಣ್ಣಿನ ಹುಟ್ಟುವ ಹಕ್ಕಿನ ಮೇಲೂ ಅಧಿಕಾರ ಸ್ಥಾಪಿಸಿದೆ. ವಿಜ್ಞಾನದ ಹೆಸರಿನಲ್ಲಿ ಗರ್ಭಕೋಶಕ್ಕೆ ಹೈಟೆಕ್ ದಾಳಿಯಿಟ್ಟು ಹೆಣ್ಣು ಭ್ರೂಣವನ್ನು ಅಮಾನುಷವಾಗಿ ಕಗ್ಗೊಲೆ ಮಾಡುತ್ತಿದ್ದೇವೆ.

'ಹೆಣ್ಣು ಹುಟ್ಟಿದರೆ ಹೆಗ್ಗಣ ಹುಟ್ಟಿದ್ಹಾಂಗ' ಎನ್ನುವ ಜನಪದ ಮಾತು ಮನುಷ್ಯನ ಅಮಾನುಷತೆಗೆ ನಿದರ್ಶನವಾಗಿದೆ. ಅಂದರೆ ಹೆಣ್ಣು ಸೆರಗಿನಲ್ಲಿ ಕಟ್ಟಿಕೊಂಡ ಕೆಂಡ, ಅದು ಹೆತ್ತವರ ಒಡಲು ಸುಡುವಂಥದ್ದು, ಹೆಣ್ಣು ಹಣದ ಖರ್ಚಿನ ಆಗರವೇ ಸರಿ, ಆದ್ದರಿಂದಲೇ ಹೆಣ್ಣು ಹುಟ್ಟಿದರೆ ಹೆತ್ತವರಿಗೆ ಅಷ್ಟೇ ಅಲ್ಲ ಎರವರಿಗೂ ತಾತ್ಸಾರ. ಈ ಹೆಣ್ಣು ಹುಟ್ಟಿದರೆ ಅಲ್ಲವೇ ಮನೆಗೆ ಹೆಗ್ಗಣವಾಗುವುದು, ಸಂಕಷ್ಟಗಳ ಸರಮಾಲೆ ಎನಿಸುವುದು. ಈ ಹೆಣ್ಣನ್ನು ಹುಟ್ಟಲಿಕ್ಕೆ ಬಿಡದೇ ಇದ್ದರೆ ಎಲ್ಲರಿಗೂ ಒಂದು ರೀತಿಯ ಸಮಾಧಾನವೆಂದು ತಿಳಿದು ಬಂದು ಇಂದು ಹೆಣ್ಣು ಶಿಸು ಹತ್ಯೆ ಮತ್ತು ಭ್ರೂಣ ಹತ್ಯೆ ನಡೆಯುತ್ತಿರುವುದು. ಹೀಗೆ ಹೆಣ್ಣು ಭ್ರೂಣವಾಗಿರುವಾಗಲೇ ಮತ್ತು ಜೀವಂತವಾಗಿರುವಾಗಲೇ ಎರಡೂ ಸ್ಥಿಯಲ್ಲಿ ಏಕಕಾಲಕ್ಕೆ ಪರುಷ ದೌರ್ಜನ್ಯವಿದಾಗಿದೆ. ಪುರುಷ ಪ್ರಧಾನ ಸಮಾಜದಲ್ಲಿ ಬದುಕುವ ಹೆಣ್ಣಿಗೆ ತನ್ನ ಬದುಕಿನ ಕುರಿತು ಯಾವುದೇ ಆಯ್ಕೆ, ಸ್ವಾತಂತ್ರ್ಯವಿರುವುದಿಲ್ಲ. ಇಲ್ಲಿ ಹೆಣ್ಣು ತನ್ನ ದೇಹ ಮತ್ತು ಮನಸ್ಸಿನ ಮೇಲೆ ನಡೆಯುವ ದೌರ್ಜನ್ಯವನ್ನು ಪ್ರಶ್ನಿಸುವ, ಪ್ರತಿಭಟಿಸುವ ಸ್ವಾತಂತ್ರ್ಯವಿಲ್ಲ. ಏಕೆಂದರೆ ಹೆಣ್ಣು ಸಾಮಾಜಿಕವಾಗಿ, ಆರ್ಥಿಕವಾಗಿ ಹಾಗೂ ಭಾವನಾತ್ಮಕವಾಗಿ ಗಂಡಿನ ಅವಲಂಬಿತಳಾಗಿ ಬದುಕುವ ಹೆಣ್ಣು ಗಂಡಿನ ನಿರ್ಧಾರಕ್ಕೆ ತಲೆಯಾಡಿಸುವ ಮೌನ ಗೌರಿಯಾಗಿದ್ದಾಳೆ.

ಅತ್ಯಾಚಾರ ಅಥವಾ ಲೈಂಗಿಕ ದೌರ್ಜನ್ಯ ಹೆಣ್ಣಿನ ಮುಂದಿರುವ ಜಾಗತಿಕ ಸವಾಲಾಗಿದೆ. ಕಾನೂನಿನ ಚೌಕಟ್ಟಿನಲ್ಲಿ ಅತ್ಯಾಚಾರವೆಂದರೆ ಮಹಿಳೆಯೊಬ್ಬಳ ಒಪ್ಪಿಗೆಯಿಲ್ಲದೆ ಅವಳ ಇಷ್ಟಕ್ಕೆ ವಿರುದ್ಧವಾಗಿ ನಡೆಯುವ ಲೈಂಗಿಕ ಸಂಕೇತವಾಗಿ ಬಳಸುವ ಸಹ್ನೆ, ಭಾಷೆ ಮತ್ತು ಕ್ರಿಯೆ ಅತ್ಯಾಚಾರ ಎನಿಸುವುದು.

ಯಾವುದೇ ಜಾತಿ, ಕೋಮಿನ, ವರ್ಗದ ಮಹಿಳೆಯರು ಅತ್ಯಾಚಾರಕ್ಕೆ ಒಳಗಾಗಬಹುದು. ವಿವಾಹ, ವಯಸ್ಸು, ಶಿಕ್ಷಣದಂತಹ ಪ್ರಶ್ನೆಗಳು ಅತ್ಯಾಚಾರಕ್ಕೆ ತಡೆಯಾಗುವುದಿಲ್ಲ. ಅತ್ಯಾಚಾರ ಮೂರು ವರ್ಷದ ಮಗುವಿನಿಂದಿಡಿದು ಅರವತ್ತು ವರ್ಷಗಳ ಮಹಿಳೆಯ ಮೇಲೆಯೂ ನಡೆಯುತ್ತದೆ. ಇದರಲ್ಲಿ ಶಿಕ್ಷಿತ, ಅಶಿಕ್ಷಿತ, ವಿವಾಹಿತ, ಅವಿವಾಹಿತ ಎಂಬ ಬೇಧ ಭಾವವಿಲ್ಲ. ಎಲ್ಲಾ ಮಹಿಳೆಯರು ಇಲ್ಲಿ ಒಂದೇ ಬಗೆಯಲ್ಲಿ ಲೈಂಗಿಕ ದೌರ್ಜನ್ಯಕ್ಕೆ ಒಳಗಾಗುತ್ತಾರೆ.

ಕಾಡುಗೊಲ್ಲ ಸಮುದಾಯದಲ್ಲಿ ಮಹಿಳೆಯು ಪುರುಷನಿಂದ ಅತ್ಯಾಚಾರಕ್ಕೆ ಒಳಗಾಗುವುದು ಬಹಳಷ್ಟು ಸುಲಭವೆಂದೇ ಹೇಳಬಹುದಾಗಿದೆ. ಈ ಸಮುದಾಯದವರು ಋತುಮತಿಯಾದ ಮತ್ತು ಮಾಸಿಕ ಮುಟ್ಟಾದ ಮಹಿಳೆಯನ್ನು ತಮ್ಮ ಹಟ್ಟಿಯಿಂದ ಹೊರಗಡೆ ಅಥವಾ ಊರ ಗೌಡರ ಮನೆಯ ವರಾಂಡದಲ್ಲಿ ಬಿಡುವುದರಿಂದ ಇಲ್ಲಿ ಮಹಿಳೆ ಸುರಕ್ಷಿತವಾಗಿರುತ್ತಾಳೆಂಬ ನಂಬಿಕೆಯಿಲ್ಲ. ಏಕೆಂದರೆ ಯಾವ ಸಮಯದಲ್ಲಿ ಯಾವ ಪುರುಷ ಈ ಮಹಿಳೆಯ ಮೇಲೆ ಹದ್ದಿನಂತೆ ಎರಗಿ ಅವಳ ಮಾನಾಪಹರಣ ಮಾಡುತ್ತಾನೆಂಬುದು ಯಾರಿಗೆ ಗೊತ್ತು.

ಈ ಸಮುದಾಯದಲ್ಲಿ ಅತ್ಯಾಚಾರಕ್ಕೆ ಒಳಗಾದ ಹೆಣ್ಣು ತಾನು ಅತ್ಯಾಚಾರಕ್ಕೆ ಬಲಿಯಾಗಿದ್ದೇನೆಂದು ಎಲ್ಲಿಯೂ ಹೇಳಿಕೊಳ್ಳದೆ ಮೌನವಾಗಿ ಅದನ್ನು ನುಂಗಿಕೊಂಡು ಸಂಕಟವನ್ನು ಅನುಭವಿಸುವಂತಾಗಿದೆ. ಇದಕ್ಕೆ ಪ್ರಮುಖ

ಕಾರಣವೆಂದರೆ ಈ ಸಮುದಾಯದಲ್ಲಿರುವ ಅತೀವವಾದ ಕಟ್ಟುಪಾಡುಗಳು, ಕಟಿಬದ್ಧ ಸಂಪ್ರದಾಯಗಳು ಮತ್ತು ಮಡಿ, ಮೈಲಿಗೆ ಎಂಬುವುಗಳಿಂದ ಈ ಸಮುದಾಯದ ಮಹಿಳೆ ಇಂತಹ ಕುಕೃತ್ಯಕ್ಕೆ ಒಳಗಾಗುವಂತಹ ಪ್ರಸಂಗಗಳಿರುವುದರಿಂದ ಮಹಿಳೆ ಜೇಡರ ಬಲೆಯೊಳಗೆ ಸಿಲುಕಿಕೊಂಡ ಹುಳುವಿನಂತೆ ಒದ್ದಾಡುತ್ತಾಳೆ. ಅತ್ಯಾಚಾರವು ಹೆಣ್ಣಿನ ಮೇಲೆ ಕುಟುಂಬದ ಒಳಗೆ ನಡೆಯಬಹುದು ಇಲ್ಲವೇ ಕುಟುಂಬದ ಹೊರಗಡೆ ಬೇಕಾದರೂ ನಡೆಯಬಹುದು. ಇಲ್ಲಿ ಕುಟುಂಬದಲ್ಲಿ ಹಿಂದಿನ ಕಾಲದಲ್ಲಿ ಅವಿಭಕ್ತ ಕುಟುಂಬದ ಸಂದರ್ಭದಲ್ಲಿ ಈ ರೀತಿಯ ಪ್ರಕರಣಗಳು ನಡೆಯುತ್ತಿದ್ದವು. ಅಂದರೆ ಗಂಡನ ತಂದೆ, ಅಣ್ಣ, ಮಾವ, ಸಹೋದರ ಮೊದಲಾದವರಿಂದ ಆದರೆ ಇಂದು ಇದು ಬದಲಾಗಿದೆ. ಏಕೆಂದರೆ ವಿಭಕ್ತ ಕುಟುಂಬ ವ್ಯವಸ್ಥೆ ಜಾರಿಯಲ್ಲಿರುವುದರಿಂದ ಕಡಿಮೆಯಾಗಿದೆ. ಆದರೆ ಇಲ್ಲಿ ಕುಟುಂಬ ಹೊರಗಡೆಯೇ ಹೆಣ್ಣಿನ ಮೇಲೆ ಅತ್ಯಾಚಾರ ಹೆಚ್ಚಾಗಿ ನಡೆಯುತ್ತದೆ. ಹೆಣ್ಣಿನ ಯೌವನ ರೂಪಗಳಷ್ಟೇ ಅತ್ಯಾಚಾರಕ್ಕೆ ಕಾರಣವಾಗುವುದಿಲ್ಲ. ಹೆಣ್ಣಿನ ಮೇಲೆ ಹೇರಲಾಗಿರುವ ಅಸಹಾಯಕತೆ, ದುರ್ಬಲತೆ ಮತ್ತು ಶೀಲದ ಪಾವಿತ್ರ್ಯದಂತಹ ಪುರುಷ ಪರ ಮೌಲ್ಯಗಳು ಹೆಣ್ಣನ್ನು ಅತ್ಯಾಚಾರಕ್ಕೆ ಒಳಗು ಮಾಡುವಲ್ಲಿ ಒಂದು ಅಸ್ತ್ರವಾಗಿ ಕೆಲಸ ಮಾಡುತ್ತವೆ. ಲಿಂಗ ವ್ಯವಸ್ಥೆಯಲ್ಲಿ ಪುರುಷನಿಗೆ ಅತ್ಯಾಚಾರವೆನಿಸುವುದು ತನ್ನ ಪುರುಷತ್ವವನ್ನು ಸಾಬೀತು ಪಡಿಸುವ ಸಂಗತಿಯಾಗುತ್ತದೆ. ಜೊತೆಗೆ ಪ್ರತಿಷ್ಠೆಯ ಪ್ರಶ್ನೆಯೆನಿಸುತ್ತದೆ. ಆದರೆ ಅದೇ ಅತ್ಯಾಚಾರಕ್ಕೆ ಒಳಗಾದ ಹೆಣ್ಣು ತನ್ನ ಸಂಪೂರ್ಣ ವ್ಯಕ್ತಿತ್ವವನ್ನು ನಾಶಮಾಡುವ ಸಂದರ್ಭವಾಗುತ್ತದೆ. ಇದು ವಿವಾಹಿತ ಮಹಿಳೆಯ ಮೇಲಾದರೆ ಸಮಸ್ಯೆ ಇನ್ನಷ್ಟು ಕಗ್ಗಂಟಾಗಿ ಅವಳ ದಾಂಪತ್ಯದಲ್ಲಿ ದೊಡ್ಡ ಬಿರುಕನ್ನು ಉಂಟುಮಾಡಿ ವಿಚ್ಛೇದನಕ್ಕೂ ಕಾರಣವಾಗಬಹುದು. ಒಮ್ಮೆ ಅತ್ಯಾಚಾರಕ್ಕೆ ಒಳಗಾದ ಹೆಣ್ಣು ಶೀಲಗೆಟ್ಟವಳು ಅಥವಾ ಮಾನಗೆಟ್ಟವಳು ಎಂಬ ಗ್ರಹಿಕೆ ಅವಳನ್ನು ಇನ್ನಷ್ಟು ಲೈಂಗಿಕ ದೌರ್ಜನ್ಯಕ್ಕೆ ಒಳಪಡಿಸುವ ಅಂಶವಾಗಿ ಮಾರ್ಪಡುತ್ತದೆ.

ಒಟ್ಟಾರೆಯಾಗಿ ಮಹಿಳೆ ಮೇಲಿನ ದೌರ್ಜನ್ಯವನ್ನು ಮೂರು ಮಜಲುಗಳಾಗಿ ವಿಂಗಡಿಸಬಹುದು. ಹೆಣ್ಣಿನ ಮೇಲೆ ಹೇರಲಾಗುವ ವಿಪರೀತ ಪಾವಿತ್ರ್ಯದ ಕಲ್ಪನೆಯಿಂದಾಗಿಯೇ ಅವಳ ಮೇಲೆ ದೌರ್ಜನ್ಯಗಳು ಹೆಚ್ಚುತ್ತಿವೆ. ದೌರ್ಜನ್ಯಕ್ಕೆ ಒಳಗಾದ ಹೆಣ್ಣಿನ ಬದುಕು ಸಾಂತ್ವನಗೊಳ್ಳುವುದಕ್ಕೆ ಬದಲಾಗಿ ನಾಶವಾಗುತ್ತಿದೆ. ಮಹಿಳೆಯರ ಮೇಲಿನ ಅತ್ಯಾಚಾರವನ್ನು ತಲಸ್ಪರ್ಶಿಯಾಗಿ ಗ್ರಹಿಸುವುದಾದರೆ ಪಿತೃಪ್ರಧಾನ ಸಮಾಜದ ರಕ್ಷಕ, ಭಕ್ಷಕ ಎಂಬ ಎರಡು ವಿರುದ್ಧಾರ್ಥ ಪದದ ನಡುವೆ ವ್ಯತ್ಯಾಸದ ಗೆರೆಯೇ ಅಳಿಸಿ ಹೋಗುವಂತಿದೆ. ನಾಗರಿಕತೆಯುದ್ದಕ್ಕೂ ಆಳುವವರು ಅಂದರೆ ಮೇಲ್ವರ್ಗದವರು ಕೆಳವರ್ಗದ ಗಂಡು ಹೆಣ್ಣುಗಳ ಮೇಲಿನ ದೌರ್ಜನ್ಯಗಳನ್ನು ತಮ್ಮ ಹಕ್ಕಾಗಿ ಬಳಸಿಕೊಂಡಂತೆ ಇಂದಿಗೂ ಕೂಡ ಅದಿಕಾರಿಗಳು, ಭೂಮಾಲೀಕರು ಅದನ್ನು ಮುಂದುವರೆಸಿಕೊಂಡು ಬರುತ್ತಿದ್ದಾರೆ. ಹಾಗಾಗಿ ಮಹಿಳೆಯರ ಮೇಲೆ ಎರಗುವ ಅತ್ಯಾಚಾರದಲ್ಲಿ ಕೇವಲ ಗಂಡು ಹೆಣ್ಣಿನ ನಡುವಿನ ಸಂಬಂಧವಷ್ಟೇ ಕ್ರಿಯಾಶೀಲವಾಗಿರದೆ ವರ್ಗ, ವರ್ಣ ಹಾಗೂ ಜಾತಿ ಇತ್ಯಾದಿಗಳೂ ಪಾಲ್ಗೊಂಡಿರುತ್ತವೆ.

ಅಲ್ಲದೆ ಪ್ರತಿಯೊಂದು ಸಮುದಾಯ ಮತ್ತು ಬುಡಕಟ್ಟುಗಳು ವೈದಿಕ ಧರ್ಮಗಳ ಪ್ರಭಾವದಿಂದಾಗಿ ಮಾತೃಪ್ರಧಾನ ವ್ಯವಸ್ಥೆಯಿಂದ ಪಿತೃಪ್ರಧಾನ ವ್ಯವಸ್ಥೆಗೆ ಪರಿವರ್ತಿತವಾಗಿರುವುದನ್ನು ಕಾಣಬಹುದು. ಇಂತಹ ಪಿತೃಪ್ರಧಾನ ವ್ಯವಸ್ಥೆಯಲ್ಲಿ ಜನಿಸಿದ ಹೆಣ್ಣು ವಿವಾಹವಾಗುವುದರೊಂದಿಗೆ ತನ್ನ ತವರು ಮನೆಯಲ್ಲಿದ್ದ ಅಧಿಕಾರ ಮತ್ತು ಕೆಲವೊಂದು ಹಕ್ಕುಗಳನ್ನು ಕಳೆದುಕೊಂಡು ಮನೆಯ ಹೊರಗಿನವಳಾಗುತ್ತಾಳೆ. ಅಂದರೆ 'ಕೊಟ್ಟ ಹೆಣ್ಣು ಕುಲಕ್ಕೆ ಹೊರೆತು' ಎನ್ನುವ ಗಾದೆಯು ಹೆಣ್ಣಿನ ಪರಾಧೀನ ಬದುಕಿನ ಸ್ಥಿತಿಯನ್ನು ಸೂಚಿಸುತ್ತದೆ. ಹೀಗೆ ವಿವಾಹವಾದಂತಹ ಹೆಣ್ಣನ್ನು ಗಂಡನ ಮನೆಗೆ ಒಪ್ಪಿಸುವ ಸಂದರ್ಭದಲ್ಲಿ ತನ್ನ ಮಗಳು ಗಂಡನ ಮನೆಯಲ್ಲಿ ಯಾವುದೇ ರೀತಿಯ ಕಷ್ಟಗಳನ್ನು, ದುಖಃ, ದುಮ್ಮಾನಗಳನ್ನು ಪಡೆಯದೆಯೇ ತಮ್ಮ ಮಗಳು ಸುಖವಾಗಿರಬೇಕು ಮತ್ತು ಆರ್ಥಿಕ ಭದ್ರತೆಯಲ್ಲಿ ಬದುಕಬೇಕು ಎಂದು ಬಳುವಳಿಯಾಗಿ ಧನ, ಕನಕ, ವಸ್ತು, ಒಡವೆಗಳನ್ನು ಸ್ವ ಇಚ್ಛೆಯಿಂದ ಕೊಡಲಾಗುತ್ತಿತ್ತು. ಇದು ಕೇವಲ ಉಳ್ಳವರ, ಮೇಲ್ವರ್ಗಗಳ, ಶ್ರೀಮಂತರಲ್ಲಿ ಕಂಡುಬರುತ್ತಿತ್ತು. ಕ್ರಮೇಣ ಏಡ್ಸ್ ವೈರಸ್‌ನ ಹಾಗೆ ಎಲ್ಲ ಸಮುದಾಯ ವರ್ಗಗಳಿಗೂ ವ್ಯಾಪಿಸತೊಡಗಿತು.

ಒಂದು ಕಾಲದಲ್ಲಿ ತಂದೆ ಸ್ವತಃ ತಾನೇ ಇಷ್ಟಪಟ್ಟು ತನ್ನ ಮಗಳು ಗಂಡನ ಮನೆಯಲ್ಲಿ ತೊಂದರೆಯನ್ನು ಅನುಭವಿಸಬಾರದೆಂದು ಸ್ತ್ರೀಧನದ ರೂಪದಲ್ಲಿ ಕೊಟ್ಟಂತಹದ್ದು ಇಂದು ಸ್ತ್ರೀಧನ ವರದಕ್ಷಿಣೆಯ ರೂಪದಲ್ಲಿ

ಹೆಣ್ಣಿನ ಪ್ರಾಣಕ್ಕೆ ಸಂಚಕಾರವನ್ನು ತಂದಿದೆ. ಇಂದಿನ ದಿನಗಳಲ್ಲಿ ಈ ವರದಕ್ಷಿಣೆಯೆನ್ನುವುದು ಗಂಡಿನ ಮತ್ತು ಗಂಡಿನ ಮನೆಯವರ ಒತ್ತಾಯದ ಪೂರ್ವಕವಾಗಿಯೋ, ಕೆಲವೊಮ್ಮೆ ಬಲತ್ಕಾರದ ಮತ್ತು ಕೆಲವು ಪ್ರಾಣಭೇದರಿಕೆಯ ಅಸ್ತ್ರವಾಗಿ ಹೆಣ್ಣನ್ನು ಮತ್ತು ಅವಳ ತವರು ಮನೆಯ ಮೇಲೆ ದೌರ್ಜನ್ಯಕ್ಕೆ ಗುರಿಮಾಡುತ್ತದೆ. ಕೇವಲ ಮೇಲುವರ್ಗ ಎಂದರೆ ಸ್ಥಿತಿವಂತರಲ್ಲಿ ಹುಟ್ಟಿಕೊಂಡ ವರದಕ್ಷಿಣೆ ಎಂಬ ಸಾಮಾಜಿಕ ಪಿಡುಗು ಇಂದು ರಕ್ತಬೀಜಾಸುರನಂತೆ ವ್ಯಾಪಿಸುತ್ತಲೇ ಇದೆ. ಪ್ರತಿಯೊಂದು ಬಡುಕಟ್ಟು ಸಮುದಾಯಗಳಲ್ಲಿ ಹರಡಿಕೊಂಡು ಆಯಾ ಸಮುದಾಯಗಳಲ್ಲಿ ಈ ವರದಕ್ಷಿಣೆಗೆ ಗುರಿಯಾಗುವ ಮಹಿಳೆಯರು ಇಂದು ಸಾಕಷ್ಟ ಸಂಖ್ಯೆಯಲ್ಲಿ ಸಾವನ್ನಪ್ಪುತ್ತಾರೆ.

ಕಾಡುಗೊಲ್ಲ ಸಮುದಾಯದಲ್ಲಿ ಆರಂಭದಲ್ಲಿ ಈ ವರದಕ್ಷಿಣೆ ಎಂಬ ಭೂತ ಎಲ್ಲಿಯೂ ಇರಲಿಲ್ಲ. ಮೊದಲಿಗೆ ಗಂಡಿನ ಕಡೆಯವರೇ ಹೆಣ್ಣಿಗೆ 'ವಧು ದಕ್ಷಿಣೆ' (ತೆರ) ಕೊಟ್ಟು ವಿವಾಹವಾಗುವ ಕಾಲವೊಂದಿತ್ತು. ಈ ಸಮುದಾಯದಲ್ಲಿ ಒಂದು ವೇಳೆ ಮದುವೆಯಾಗುವ ವರನು ಏನಾದರೂ ವರದಕ್ಷಿಣೆಯನ್ನು ಕೇಳಿದ್ದಾದರೆ ಆಮಿಷವನ್ನು ಮುಂದೊಡ್ಡಿದ್ದಾದರೆ ಅವನು ಅತೀವವಾದ ಅವಮಾನಕ್ಕೆ ಗುರಿಯಾಗುತ್ತಿದ್ದ. ಇದಕ್ಕಾಗಿ ಅಂದಿನ ದಿನಗಳಲ್ಲಿ ವರದಕ್ಷಿಣೆಯ ವಿಷಯವೇ ಪ್ರಸ್ತಾಪವಾಗುತ್ತಿರಲಿಲ್ಲ. ಆದರೆ ಇತ್ತೀಚಿಗೆ ಕಾಡುಗೊಲ್ಲ ಸಮುದಾಯವೂ ಸಹ ತನ್ನನ್ನು ಸಾಮಾಜಿಕವಾಗಿ ಮೇಲ್ದರ್ಜೆಗೇರಿಸಿಕೊಳ್ಳುವ ಪ್ರತಿಷ್ಠಾತ್ಮಕ ಸಾಧನವನ್ನಾಗಿ ವರದಕ್ಷಿಣೆಯನ್ನು ಬಳಸಿಕೊಂಡಿರುವುದು ದುರದೃಷ್ಟಕರ ಸಂಗತಿಯೆನ್ನಬಹುದು. ಪ್ರಸ್ತುತ ಅಧ್ಯಯನ ವ್ಯಾಪ್ತಿಯಲ್ಲಿ ಬರುವ ಮೊಳಕಾಲ್ಮೂರು ತಾಲ್ಲೂಕಿನ ಕಾಡುಗೊಲ್ಲ ಸಮುದಾಯವಿರುವ ಪ್ರದೇಶವು ಆಧುನಿಕತೆ ವೈಜ್ಞಾನಿಕತೆಯ ವಿಪತ್ಕಾರಿ ಪರಿಣಾಮಗಳಿಂದ ಹೊರತಾಗಿಲ್ಲ. ಕಾಡುನಾಶ, ಅದರಿಂದಾದ ಮಳೆಯ ಕೊರತೆಯಿಂದ ಪಶುಪಾಲನೆಯನ್ನೇ ಮುಖ್ಯವೃತ್ತಿಯನ್ನಾಗಿಸಿಕೊಂಡಿದ್ದ ಕಾಡನ್ನೇ ಕಳೆದುಕೊಂಡಿದೆ. ಇತ್ತ ಕೃಷಿಗೆ ತನ್ನ ವೃತ್ತಿಯನ್ನು ಬದಲಾಯಿಸಿಕೊಂಡರೂ ಮಳೆಯ ಕೊರತೆಯಿಂದಾಗಿ ಬದುಕು ನೀಗಿಸುವುದು ದುಸ್ತರವಾದಂತಹ ಸಂದರ್ಭದಲ್ಲಿ ತಮ್ಮ ಹೆಣ್ಣುಮಕ್ಕಳಿಗೆ ವರದಕ್ಷಿಣೆ ನೀಡಿ ಮದುವೆ ಮಾಡುವಂತಹ ಸ್ಥಿತಿಯಲ್ಲಂತೂ ಇಲ್ಲ.

ಚಿತ್ರದುರ್ಗ ಜಿಲ್ಲೆ ಐತಿಹಾಸಿಕ ಮಹತ್ವವನ್ನು ಪಡೆದು ರಾರಾಜಿಸುವಂತೆಯೇ ಮೊಳಕಾಲ್ಮೂರು ತಾಲ್ಲೂಕು ಸಹ ಐತಿಹಾಸಿಕವಾಗಿ ಮಹತ್ವವನ್ನು ಪಡೆದಿದೆ. ಇಲ್ಲಿ ಹಲವಾರು ಬಡುಕಟ್ಟು, ಸಮುದಾಯಗಳು ನೆಲೆಸಿವೆ. ಅವುಗಳಲ್ಲಿ ಪ್ರಮುಖವಾದವುಗಳೆಂದರೆ ಕಾಡುಗೊಲ್ಲರು, ಊರು ಗೊಲ್ಲರು, ಮ್ಯಾಸಬೇಡರು, ಊರು ಬೇಡರು ಈ ತಾಲ್ಲೂಕಿನ ಪ್ರದೇಶದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಕಂಡುಬರುತ್ತಾರೆ. ಇಂತಹ ಬುಡಕಟ್ಟುಗಳ ಬಗ್ಗೆ ಈಗಾಗಲೇ ಸಮಗ್ರ ಅಧ್ಯಯನಗಳು ಆಗಿವೆ. ಇನ್ನೂ ಆಗುತ್ತಲಿವೆ. ಇಲ್ಲಿ ಪ್ರಮುಖವಾಗಿ ಪುರುಷ ಪ್ರಧಾನ ಸಮಾಜ ಇರುವುದರಿಂದ ಪುರುಷ ಕೇಂದ್ರಿತ ಅಧ್ಯಯನಗಳೇ ಅಧಿಕವಾಗಿವೆ. ಉದಾಹರಣೆಗೆ ಸಾಂಸ್ಕೃತಿಕ ವೀರನಾದ ಜುಂಜಪ್ಪ, ಎತ್ತಪ್ಪ, ಇವರುಗಳ ಬಗ್ಗೆಯೇ ಅಧ್ಯಯನಗಳು ಆಗಿವೆಯೇ ಹೊರೆತು ಎಲ್ಲಿಯೂ ಸಹ ಈ ಕಾಡುಗೊಲ್ಲ ಸಮುದಾಯದ ಮಹಿಳೆಯ ಬಗ್ಗೆ ಸೂಕ್ಷ್ಮ ಅಧ್ಯಯನಗಳು ಆಗಿಲ್ಲವೆಂದರೆ ತಪ್ಪಾಗಲಾರದು. ಆದುದರಿಂದ 'ಮೊಳಕಾಲ್ಮೂರು ತಾಲ್ಲೂಕಿನ ಕಾಡುಗೊಲ್ಲ ಸಮುದಾಯದ ಮಹಿಳೆ' ಎಂಬ ಅಧ್ಯಯನವನ್ನು ಕೈಗೊಳ್ಳಲಾಗಿದೆ. ಕಾಡುಗೊಲ್ಲರ ಪ್ರಮುಖ ನೆಲೆಗಳಾದ ಮೊಳಕಾಲ್ಮೂರು ತಾಲ್ಲೂಕನ್ನು ಕೇಂದ್ರವಾಗಿಟ್ಟುಕೊಂಡು ಅದರಲ್ಲಿ ಕೆಲವೊಂದು ಗ್ರಾಮಗಳಾದ ಹೊಸಹಳ್ಳಿ, ವೆಂಕಟಾಪುರ, ಹೊಸಕೋಟೆ, ನಾಗಸಮುದ್ರ, ಚಿಕ್ಕೇರಹಳ್ಳಿ, ಪುಡಗೋಸಿ ತಿಮ್ಮಯ್ಯನ ಹಟ್ಟಿ, ಗಿರಿಜನ ಹಟ್ಟಿ ಈ ಗೊಲ್ಲರ ಹಟ್ಟಿಗಳನ್ನು ಮಾತ್ರ ಪ್ರಮುಖವಾಗಿಟ್ಟುಕೊಂಡು ಈ ಸಮುದಾಯದ ಮಹಿಳೆಯನ್ನೇ ಕೇಂದ್ರಬಿಂದುವನ್ನಾಗಿಟ್ಟುಕೊಂಡು ಪ್ರಸ್ತುತ ಅಧ್ಯಯನದ ವ್ಯಾಪ್ತಿಗೆ ಒಳಪಡಿಸಿಕೊಳ್ಳಲಾಗಿದೆ.

ಕಾಡುಗೊಲ್ಲ ಸಮುದಾಯದ ಮಹಿಳೆ ಪ್ರಾಚೀನ ಕಾಲದಿಂದಲೂ ಪುರುಷನೊಂದಿಗೆ ಕಾಡುಮೇಡುಗಳಲ್ಲಿ ಬೆಟ್ಟಗುಡ್ಡಗಳಲ್ಲಿ ಸಂಚರಿಸುತ್ತಾ ಬೇಟೆಯಾಡುತ್ತಾ ಮಾಂಸವನ್ನು ಆಹಾರಕ್ಕೆ, ಚರ್ಮವನ್ನು ಉಡುಪಾಗಿ ಬಳಸುತ್ತಾ ಮರದ ಪೊಟರುಗಳಲ್ಲಿ, ಗುಹೆಗಳಲ್ಲಿ ಜೀವನ ಸಾಗಿಸುತ್ತಿದ್ದರು. ನಂತರ ಇವರು ಪಶುಪಾಲನೆಯನ್ನು ತಮ್ಮ ವೃತ್ತಿಯನ್ನಾಗಿ ಮಾಡಿಕೊಂಡು ಮೇವು ನೀರು ಸಮೃದ್ಧವಾಗಿ ಸಿಗುವಂತಹ ಪ್ರದೇಶಗಳಿಗೆ ತಮ್ಮ ದನ ಕುರಿಗಳನ್ನು ಮೇಯಿಸುತ್ತಾ ಅಲೆಮಾರಿ ಜೀವನವನ್ನು ಸಾಗಿಸುತ್ತಿದ್ದರು. ನಂತರ ಒಂದೆಡೆ ನಗರ ಪ್ರದೇಶಗಳಿಂದ ದೂರದಲ್ಲಿ ಬಯಲು ಪ್ರದೇಶಗಳಲ್ಲಿ ದಿಣ್ಣೆಯ ಮೇಲೋ ಜೌಗು ಪ್ರದೇಶದಲ್ಲಿ ನೈಸರ್ಗಿಕವಾಗಿ ದೊರೆಯುವ ಅಡವಿ ಹುಲ್ಲು ಮತ್ತು ಕಟ್ಟಿಗೆಗಳಿಂದ ಗುಡಿಸಲುಗಳನ್ನು ನಿರ್ಮಿಸಿಕೊಂಡು ಭೂಮಿಯನ್ನು ಸಾಗುವಳಿ ಮಾಡಿ ಉತ್ಪಾದನೆಯನ್ನು ಕಂಡುಕೊಂಡು ಹಂತ ಹಂತವಾಗಿ ತಮ್ಮ ಬದುಕಿನಲ್ಲಿ ಬದಲಾವಣೆ ಕಂಡುಕೊಳ್ಳತೊಡಗಿದರು. ಇಲ್ಲಿ ಬದಲಾವಣೆ ಎನ್ನುವುದು ಅಲೆಮಾರಿಯಿಂದ ಒಂದೆಡೆ ನೆಲೆ ನಿಂತುಕೊಂಡದ್ದು ಮತ್ತು ಬದಲಾವಣೆಯು ಕೇವಲ ಪುರುಷನಿಗೆ ಮಾತ್ರ ಅನ್ವಯಿಸುತ್ತದೆಯೇ ವಿನಃ ಈ ಕಾಡುಗೊಲ್ಲ ಸಮುದಾಯದ ಮಹಿಳೆಗೆ ಇದು ಅನ್ವಯಿಸದು ಎಂದೇ ಹೇಳಬಹುದು. ಏಕೆಂದರೆ ಇದು ಮಹಿಳೆಯನ್ನು ಸರ್ವರಂಗಗಳಿಂದ ಹಿಂದಿಕ್ಕಿ ಅವಳ ಮೇಲೆ ಗೊಡ್ಡು ಸಂಪ್ರದಾಯಗಳ ಭಾರವಾದ ಮೂಟೆ ಹೊರಿಸಿದ್ದಾರೆ.

ಈ ಪ್ರದೇಶದಲ್ಲಿ ಶಿಕ್ಷಣವು ಕೆಲವೇ ಮೇಲ್ವರ್ಗದ ಜನರಿಗೆ ಮಾತ್ರ ಸೀಮಿತವಾಗಿತ್ತು. ಆದರೆ ಬ್ರಿಟಿಷರ ಆಗಮನದಿಂದೀಚೆಗೆ ಶಿಕ್ಷಣವು ಮೇಲ್ವರ್ಗದಿಂದಿಡಿದು ಎಲ್ಲಾ ತಳಸಮುದಾಯಗಳಿಗೂ ವಿಸ್ತರಿಸಿತು. ಇದರ ಪರಿಣಾಮವಾಗಿ ಕೆಳವರ್ಗದ ಜನಾಂಗಗಳಲ್ಲಿ ಮತ್ತು ಬಡುಕಟ್ಟುಗಳಲ್ಲಿ ಹೊಸ ಅರಿವು ಮೂಡಿತು. ತಾವು ನಾಗರಿಕರಾಗಬೇಕು, ನಾಗರಿಕ ಸಮುದಾಯಗಳೊಂದಿಗೆ ಸಮಾನವಾಗಿ ಬದುಕಬೇಕು ಎಂಬ ಆಪೇಕ್ಷೆ ಪ್ರಬಲವಾಯಿತು. ಇಂತಹುದೊಂದು ಆಪೇಕ್ಷೆಯು ಈ ಸಮುದಾಯದ ಕೇವಲ ಪುರುಷ ವರ್ಗದಲ್ಲಿ ಮಾತ್ರ

ಪ್ರಬಲವಾಯಿತೆ ವಿನಃ ಕಾಡುಗೊಲ್ಲ ಮಹಿಳೆಗೆ ಇದು ಗಗನ ಕುಸುಮವೇ ಆಯಿತು. ಭಾರತೀಯ ಸಮುದಾಯವನುನು ತೀವ್ರಗತಿಯಲ್ಲಿ ಬದಲಾವಣೆಗೆ ಗುರಿಪಡಿಸಿದವು. ಇದಕ್ಕೆ ಬುಡಕಟ್ಟುಗಳೂ ಹೊರತಾಗಿರಲಿಲ್ಲ.

ಕಾಡುಗೊಲ್ಲ ಸಮುದಾಯದವರು ತಮ್ಮ ಬದುಕಿನಲ್ಲಿ ಬದಲಾವಣೆ ಕಂಡುಕೊಂಡಿದ್ದಾರೆ. ತಮ್ಮ ಮೂಲ ವೃತ್ತಿಯ ಜೊತೆಗೆ ಶಿಕ್ಷಣ, ಇತರೆ ಭಿನ್ನ ವೃತ್ತಿಗಳನ್ನು ಕೈಗೊಂಡು ಜೀವನ ನಡೆಸುತ್ತಿದ್ದಾರೆ. ಇದು ಕೇವಲ ಬೆರಳೆಣಿಕೆಯಷ್ಟು ಪುರುಷ ವರ್ಗಕ್ಕೆ ಮಾತ್ರ ಸೀಮಿತವಾಗಿದೆಯೇ ಹೊರೆತು ಈ ಸಮುದಾಯದ ಮಹಿಳೆ ದನ ಕುರಿ ಕಾಯಲು ಹೊಲದಲ್ಲಿ ಕೆಲಸ ಮಾಡಲು ತೊಡಗಿದ್ದಾಳೆ. ಆದರೆ ನಗರ ಪಟ್ಟಣಗಳಲ್ಲಿರುವ ಮಹಿಳೇ ಇತರೆ ವೃತ್ತಿಗಳನ್ನು ಕೈಗೊಂಡು ಜೀವನ ನಿರ್ವಹಿಸುತ್ತಿದ್ದಾಳೆ. ಇವರಲ್ಲಿ ಶೈಕ್ಷಣಿಕ ಪ್ರಗತಿಯಾದಂತೆಲ್ಲಾ ತಮ್ಮ ಹಳೆಯ ಆಚರಣೆ ಮತ್ತು ಜೀವನ ವಿಧಾನಗಳ ಹೊಸ ಬಗೆಯನ್ನು ಕಂಡುಕೊಂಡಿದ್ದಾರೆ. ತಮ್ಮ ಉಡುಪು, ವಸತಿ ವ್ಯವಸ್ಥೆ, ಆಹಾರ ಪದ್ಧತಿಯಲ್ಲಿ ಭಿನ್ನತೆಯನ್ನು ಹೊಂದಿದ್ದಾಳೆ. ಇವರ ವಿಶಿಷ್ಟ ಅಂಶಗಳು ಕರಗುತ್ತಾ ಬರುವುದರಿಂದ ಅವರ ಸುತ್ತಮುತ್ತಲಿನ ಜನಸಮುದಾಯದಿಂದ ಬೇರೆಯಾಗಿ ಗುರುತಿಸುವುದು ಕಷ್ಟ. ಆಧುನಿಕತೆಯ ಹೊಸ್ತಿಲಿಗೆ ಕಾಡುಗೊಲ್ಲರ ಮಹಿಳೆಯು ಕಾಲಿಡುತ್ತಿರುವುದರ ಸೂಚನೆ ಇದಾಗಿದೆ.

ಮೊಳಕಾಲ್ಮೂರು ತಾಲ್ಲೂಕಿನ ಕಾಡುಗೊಲ್ಲ ಸಮುದಾಯದ ಮಹಿಳೆಯ ಬಗ್ಗೆ ಕ್ಷೇತ್ರಕಾರ್ಯ ಕೈಗೊಂಡಾಗ ಈ ಸಮುದಾಯದ ಮಹಿಳೆ ವಾರ್ಷಿಕಾವರ್ತನ ಆಚರಣೆಗಳಾದ ಹಬ್ಬಗಳಲ್ಲಿ, ಜಾತ್ರೆಗಳಲ್ಲಿ, ಪೂಜಾ ಪದ್ಧತಿಗಳಲ್ಲಿ, ಹರಕೆ, ಗಂಗೆ ಪೂಜೆ ಮಾಡುವಂತಹ ಸಂದರ್ಭಗಳಲ್ಲಿ ಮಹಿಳೆಯ ಪ್ರಮುಖ ಪಾತ್ರದ ಬಗ್ಗೆ ಕೂಲಂಕಷವಾಗಿ ವಿಚಾರಿಸಿ ಅದನ್ನು ಇಲ್ಲಿ ವಿಶದ ಪಡಿಸಲಾಗಿದೆ.

ಸಂಪ್ರದಾಯಗಳು ಮತ್ತು ನಂಬಿಕೆಗಳಿಗೆ ಸಂಬಂಧಿಸಿದಂತೆ ಜನನ, ಹೆರಿಗೆ ಗುಡ್ಲು, ನಾಮಕರಣ, ಜವಳ ಶಾಸ್ತ್ರ, ಋತುಮತಿ ಶಾಸ್ತ್ರ, ವಿವಾಹ ಪದ್ಧತಿ, ಶವಸಂಸ್ಕಾರ ಮೊದಲಾದ ಸಂದರ್ಭಗಳಲ್ಲಿ ಮಹಿಳೆಯು ಅನುಭವಿಸುವ ಯಾತನಾಮಯ ನೋವು, ಅವಮಾನವನ್ನು, ಪುರುಷ ದೌರ್ಜನ್ಯವನ್ನು ಕೂಲಂಕಷವಾಗಿ ವಿವರಿಸಲಾಗಿದೆ.

ಸಮಕಾಲೀನ ಸಂದರ್ಭದಲ್ಲಿ ಗೊಲ್ಲ ಮಹಿಳೆ ಸಾಮಾಜಿಕ ನೆಲೆಯಲ್ಲಿ ಉಡುಗೆ-ತೊಡುಗೆ, ಆಹಾರ ಪದ್ಧತಿ, ವಸತಿ ವ್ಯವಸ್ಥೆ, ವೃತ್ತಿಗಳು, ರಕ್ತಸಂಬಂಧ, ಬೆಡಗುಗಳು, ಕುಟುಂಬ ಪದ್ಧತಿ, ನ್ಯಾಯ ಪದ್ಧತಿ, ವಿಧಿ-ನಿಷೇಧಗಳ ಕುರಿತು ವಿವರವಾಗಿ ಚರ್ಚಿಸಲಾಗಿದೆ:

ಆರ್ಥಿಕವಾಗಿ ಮಹಿಳೆ ಬಹಳಷ್ಟು ದುರ್ಬಲಳಾಗಿದ್ದಾಳೆ. ಅವಳು ಬೆಳಿಗ್ಗೆಯಿಂದ ಹಿಡಿದು ರಾತ್ರಿ ಮಲಗುವವರೆಗೂ ಏನೆಲ್ಲಾ ಕೆಲಸಗಳನ್ನು ಮಾಡಿದರೂ ಸಹ ಅವೆಲ್ಲಾ ಇಲ್ಲಿ ನಗಣ್ಯವಾಗಿವೆ. ಆದರೆ ಪುರುಷ ಮಾಡುವ ಕಾರ್ಯಗಳಿಗೆ ಮಾತ್ರ ಇಲ್ಲಿ ಬೆಲೆ ಇದೆ. ಈ ಮಹಿಳೆಗೆ ಹಣದ ಅವಶ್ಯಕತೆ ಬಂದಾಗ ಕೈಚಾಚುವಂತಹದ್ದು ಅವಳನ್ನು ಆರ್ಥಿಕತೆಯಿಂದ ಮುಕ್ತಳನ್ನಾಗಿಸುವಲ್ಲಿ ಈ ಸಮುದಾಯ ವಿಫಲವಾಗಿದೆ.

ಇಂದಿನ ಜಾಗತಿಕ ಸಂದರ್ಭದಲ್ಲಿ ಗೊಲ್ಲ ಮಹಿಳೆ ಅನಾದಿಕಾಲದಿಂದ ಆಚರಿಸಿಕೊಂಡು ಬಂದಂತಹ ಗೊಡ್ಡು ಸಂಪ್ರದಾಯಗಳು, ನಂಬಿಕೆಗಳು, ಆಚರಣೆಗಳು ಮೊದಲಾದವುಗಳನ್ನು ಮೆಲ್ಲ ಮೆಲ್ಲನೆ ಗಾಳಿಗೆ ತೂರಿ ಸಾಂಸ್ಕೃತಿಕವಾಗಿ ಬಂದಂತಹ ರವಿಕೆ ರಹಿತ ಸ್ಸಂಪ್ರದಾಯ, ಗೊಲ್ಲಕಡಗ ಇವು ಸಂಪೂರ್ಣವಾಗಿ ಇಂದಿನ ಆಧುನಿಕ ಗೊಲ್ಲ ಮಹಿಳೆಯಲ್ಲಿ ಮರೆಯಾಗಿರುವುದನ್ನು ಅಂದರೆ ಸಾಂಸ್ಕೃತಿಕವಾಗಿ ಪಲ್ಲಟಗೊಂಡಿರುವುದರ ಬಗ್ಗೆ ವಿವರಿಸಲಾಗಿದೆ. ಇಂದಿನ ಕಾಡುಗೊಲ್ಲ ಸಮುದಾಯದ ಮಹಿಳೆ ಏನೆಲ್ಲಾ ಅಂದರೆ ಸಾಮಾಜಿಕವಾಗಿ, ಆರ್ಥಿಕವಾಗಿ, ಶೈಕ್ಷಣಿಕವಾಗಿ, ಸಾಂಸ್ಕೃತಿಕವಾಗಿ ಪಲ್ಲಟಗಳನ್ನು ಹೊಂದಿ ಬದಲಾವಣೆಯಾಗಿದ್ದರೂ ಸಹ ಮಹಿಳೆ ಹಲವಾರು ರೀತಿಯ ಬಿಕ್ಕಟ್ಟುಗಳು ಮತ್ತು ಸವಾಲುಗಳನ್ನು ಎದುರಿಸುತ್ತಿದ್ದಾಳೆ. ಇದಕ್ಕೆ ಇನ್ನೂ ಬಿಡದ ಪುರುಷಶಾಹಿ ಸಮಾಜದ ಕಟಿಬದ್ಧ ಸಂಪ್ರದಾಯಗಳು, ಗೊಡ್ಡು ನಂಬಿಕೆಗಳು, ಮತ್ತು ಮುಂದುವರೆದ ವೈಜ್ಞಾನಿಕ ಅವಿಷ್ಕಾರಗಳು ಮಹಿಳೆಯನ್ನು ಬಿಕ್ಕಟ್ಟು ಮತ್ತು ಸವಾಲುಗಳಿಗೆ ಗುರಿ ಮಾಡಿದೆ.

# ಗ್ರಂಥ ಋಣ


೧. ಇಂದಿರಾ ಟಿ. ಆರ್., **ಮಹಿಳೆ ಸಮಾಜ ಮತ್ತು ಸಂಸ್ಕೃತಿ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨

೨. ಕಡೇ ತೋಟದ ಎಸ್. ಕೆ., **ಧರ್ಮ-ಸಂಸ್ಕೃತಿ-ಸಮಾಜ,** ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೧

೩. ಕಮಲಾ ಹಂಪನಾ, **ಬೊಗಸೆ,** ಸಿ.ವಿ.ಜಿ. ಪಬ್ಲಿಕೇಷನ್ಸ್, ಬೆಂಗಳೂರು, ೨೦೦೩

೪. ಕೃಷ್ಣಮೂರ್ತಿ ಹನೂರು, **ಕಾಡುಗೊಲ್ಲರು: ಕರ್ನಾಟಕ ಬುಡಕಟ್ಟುಗಳು** ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು, ೧೯೯೮

೫. ಗಾಯಿತ್ರಿ ನಾವಡ, **ಮಹಿಳಾ ಸಂಕಥನ,** ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೩

೬. ಗುರುಲಿಂಗಯ್ಯ, ಎಂ., **ಕರ್ನಾಟಕದ ಗೊಲ್ಲ ಸಮುದಾಯ: ಸಮಾಜೋ-ಸಾಂಸ್ಕೃತಿಕ ಅಧ್ಯಯನ,** ಶಕ್ತಿ ಪ್ರಿಂಟರ್ಸ್ ಅಂಡ್ ಪಬ್ಲಿಷರ್ಸ್, ಬೆಂಗಳೂರು, ೨೦೦೫

೭. ಗುರುಲಿಂಗಯ್ಯ, **ಬುಡಕಟ್ಟುಗಳು ಮತ್ತು ಅಭಿವೃದ್ಧಿ,** ಪ್ರಸಾರಾಂಗ, ಮಂಗಳೂರು ವಿಶ್ವವಿದ್ಯಾಲಯ, ಮಂಗಳೂರು, ೨೦೦೫

೮. **ಚಿತ್ರದುರ್ಗ ಜಿಲ್ಲೆ,** ಮೈಸೂರು ಸರ್ಕಾರದ ಪ್ರಚಾರ ಮತ್ತು ವಾರ್ತಾ ಇಲಾಖೆಯ ಪ್ರಕಟಣೆ, ಬೆಂಗಳೂರು, ೧೯೬೬

೯. ಜೋಗನ್ ಶಂಕರ್, **ಗ್ರಾಮ ಸಮಾಜ,** ಜೀವ ಪ್ರಕಾಶನ, ಮೈಸೂರು, ೧೯೯೫

೧೦. ನಂಜಮ್ಮಣ್ಣಿ ಎಂ., **ಸಾಮಾಜಿಕ ಮಾನವಶಾಸ್ತ್ರ,** ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೭೪

೧೧. ನಾಗರಾಜ ಬಿ.ವಿ., **ಗೊಲ್ಲರ ಹಟ್ಟಿ,** ಆಪ್ತ ಪ್ರಕಾಶನ, ಬೆಂಗಳೂರು, ೧೯೮೮

೧೨. ನಾಗೇಶ್ ಹೆಚ್. ವಿ., **ಗ್ರಾಮವ್ಯಾಸಂಗ,** ಚಂದ್ರನಾಥ ಪ್ರಕಾಶನ, ಧಾರವಾಡ, ೧೯೮೧

೧೩. ಪರಮಶಿವಯ್ಯ ಜಿ.ಶಂ., **ದಕ್ಷಿಣ ಕರ್ನಾಟಕ ಜಾನಪದ ಕಾವ್ಯ ಪ್ರಕಾರಗಳು,** ಪ್ರಸಾರಾಂಗ, ಮೈಸೂರು ವಿ.ವಿ., ೧೯೭೯

೧೪. ಬೋರಲಿಂಗಯ್ಯ ಹಿ. ಚಿ., **ಕರ್ನಾಟಕ ಜನಪದ ಕಲೆಗಳ ಕೋಶ,** ಪ್ರಸಾರಾಂಗ, ಕ.ವಿ.ವಿ.ಹಂ., ೧೯೯೬

೧೫. ಬರಗೂರು ರಾಮಚಂದ್ರಪ್ಪ, **ಕರ್ನಾಟಕ ಸಂಗಾತಿ,** ಕನ್ನಡ ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು, ೨೦೦೨

೧೬. ಮೈತ್ರಿ ಕೆ.ಎಂ., **ಕೃಷ್ಣಗೊಲ್ಲರ ಕಥನ-ಕಾವ್ಯಗಳು,** ಪ್ರಸಾರಾಂಗ, ಕ.ವಿ.ವಿ.ಹಂ., ೨೦೦೦

೧೭. ಮೀರಾಸಾಬಿಹಳ್ಳಿ ಶಿವಣ್ಣ, **ಕಾಡುಗೊಲ್ಲರ ಸಂಸ್ಕೃತಿ,** ಸಿ.ವಿ.ಜಿ.ಪಬ್ಲಿಷರ್ಸ್, ಬೆಂಗಳೂರು, ೨೦೦೪

೧೮. ಮೀರಾಸಾಬಿಹಳ್ಳಿ ಶಿವಣ್ಣ, **ಸಾಂಸ್ಕೃತಿಕ ಬುಡಕಟ್ಟು ವೀರರು,** ಸಿ.ವಿ.ಜಿ.ಪಬ್ಲಿಷರ್ಸ್, ಬೆಂಗಳೂರು, ೨೦೦೬

೧೯. ಮೀರಾಸಾಬಿಹಳ್ಳಿ ಶಿವಣ್ಣ, **ಗೊಲ್ಲಕಡಗ,** ಸಿ.ವಿ.ಜಿ. ಪಬ್ಲಿಷರ್ಸ್, ಬೆಂಗಳೂರು, ೧೯೯೯

೨೦. ಲಕ್ಷ್ಮಣ್ ತೆಲಗಾವಿ ಮತ್ತು ಕೆ. ವೆಂಕಣಾಚಾರ್, ಸಂ., **ಐತಿಹಾಸಿಕ ಚಿತ್ರದುರ್ಗ,** ಜಿಲ್ಲಾ ಸಂಶೋಧನಾ ಮಂಡಳಿ, ಚಿತ್ರದುರ್ಗ, ೧೯೭೯

೨೧. ಲಕ್ಷ್ಮಣ್ ತೆಲಗಾವಿ, ಹಿಂದುಳಿದ ವರ್ಗಗಳು ಮತ್ತು ದಲಿತ ಚಳವಳಿಗಳು, ಪ್ರಸಾರಾಂಗ, ಕ.ವಿ.ವಿ.ಹಂ., ೧೯೯೯

೨೨. ಶಾಂತಾ ಇಮ್ರಾಪುರ, ಮಹಿಳೆ-ಸಾಹಿತ್ಯ-ಸಂಸ್ಕೃತಿ, ಚೇತನ ಪ್ರಕಾಶನ, ಧಾರವಾಡ, ೨೦೦೧

೨೩. ಶ್ರೀಮತಿ ಹೆಚ್. ಎಸ್., ಹೆಣ್ಣು-ಹೆಂಗಸು, ಶಕ್ತಿ ಪ್ರಿಂಟರ್ಸ್ ಅಂಡ್ ಪಬ್ಲಿಷರ್ಸ್, ಬೆಂಗಳೂರು, ೨೦೦೪

೨೪. ಶಂಕರನಾರಾಯಣ ತೀ.ನಂ., ಕಾಡುಗೊಲ್ಲರ ಸಂಪ್ರದಾಯಗಳು ಮತ್ತು ನಂಬಿಕೆಗಳು, ಪ್ರಸಾರಾಂಗ, ಮೈಸೂರು ವಿ.ವಿ.., ಮೈಸೂರು, ೧೯೮೨

೨೫. ಶಂಕರ್‌ರಾವ್ ಚಾ. ನ., ಭಾರತೀಯ ಸಮಾಜ, ಜೈಭಾರತ ಪ್ರಕಾಶನ, ಮಂಗಳೂರು, ೧೯೯೧

೨೬. ಸುನಂದಮ್ಮ ಆರ್., ಮಹಿಳಾ ಸಂಸ್ಕೃತಿ, ಶಕ್ತಿ ಪ್ರಿಂಟರ್ಸ್ ಅಂಡ್ ಪಬ್ಲಿಷರ್ಸ್, ಬೆಂಗಳೂರು, ೨೦೦೫

೨೭. ಹಿರಿಯಣ್ಣ ಎ. ಸಂ., ಕಾಡುಗೊಲ್ಲರ ಜನಪದ ಗೀತೆಗಳು, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿ.ವಿ., ಮೈಸೂರು, ೧೯೭೮

೨೮. ನಿಘಂಟು, ಕನ್ನಡ ರತ್ನಕೋಶ, ಕನ್ನಡ ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು, ೧೯೭೭

೨೯. ಅಯ್ಯರ್. ಎಲ್.ಕೆ.ಎ., ದ ಮೈಸೂರು ಟ್ರೈಬ್ಸ್ ಅಂಡ್ ಕಾಸ್ಟ್, ಸಂಪುಟ ಮೂರು, ಮಿಟ್ಟಲ್ ಪಬ್ಲಿಕೇಷನ್ಸ್, ನವದೆಹಲಿ, ೧೯೩೧

೩೦. ಗುರುಲಿಂಗಯ್ಯ ಎಂ., ಸೋಶಿಯಲ್ ಮೊಬಿಲಿಟಿ ಅಂಡ್ ಸೋಶಿಯಲ್ ಚೇಂಜ್ ಅಮಾಂಗ್ ಗೊಲ್ಲಾಸ್, ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ, ಮಂಗಳೂರು, ೨೦೦೦

೩೧. ಥರ್ಸ್ಟನ್, ಎಡ್ಗರ್, ಕಾಸ್ಟ್ ಅಂಡ್ ಟ್ರೈಬ್ಸ್ ಆಫ್ ಸೌತ್ ಇಂಡಿಯಾ, ಸಂಪುಟ ಮೂರು, ಸರ್ಕಾರಿ ಮುದ್ರಣಾಲಯ, ಮದ್ರಾಸ್, ೧೯೦೯

೩೨ ಹೆಬ್ಬಾಲೆ ಕೆ. ನಾಗೇಶ್, ಜಾನಪದ ಬನಸಿರಿ, ರುಚಿರ ಪ್ರಕಾಶನ, ಹೊಸಪೇಟೆ, ೨೦೦೩

೩೩. ಮೊಗಳ್ಳಿ ಗಣೇಶ್, ದಲಿತರು ಮತ್ತು ಜಾಗತೀಕರಣ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ೧೯೯೯

೩೪. ಮಂಜುನಾಥ ಬೇವಿನಕಟ್ಟಿ, ಜನಪದ ನಂಬಿಕೆಗಳು, ಪ್ರಸಾರಾಂಗ, ಕ.ವಿ.ವಿ.ಹಂ., ೧೯೯೬

೩೫. ರಮೇಶ್ ಸ. ಚಿ., ಅಲೆಮಾರಿಗಳ ಸ್ಥಿತಿಗತಿ, ಪ್ರಸಾರಾಂಗ, ಕ.ವಿ.ವಿ.ಹಂ., ೨೦೦೫

೩೬. ಹರಿಶ್ಚಂದ್ರ ದಿಗ್ಸಂಗೀಕರ, ದಲಿತ ತತ್ವಪದಕಾರ ಜಂಬಗಿ ಶರಣ, ಅಭಯ ಪ್ರಕಾಶನ, ಗುಲ್ಬರ್ಗಾ, ೨೦೦೨

೩೭. ಸಿ. ಟಿ. ಗುರುಪ್ರಸಾದ್, ಕನ್ನಡ ಜಾನಪದ ಗ್ರಂಥ ಸೂಚಿ, ಪ್ರಸಾರಾಂಗ, ಕ.ವಿ.ವಿ.ಹಂ., ೨೦೦೪

# ವಕ್ತೃವಿವರ

| ಕ್ರ. ಸಂಖ್ಯೆ | ಹೆಸರು | ವಯಸ್ಸು | ಜಾತಿ | ಬೆಡಗು | ವಿದ್ಯಾಭ್ಯಾಸ | ಸ್ಥಳ | ವೃತ್ತಿ |
|---|---|---|---|---|---|---|---|
| ೧. | ಕರಿಯಮ್ಮಜ್ಜಿ | ೭೦ | ಗೊಲ್ಲರು | ಮಾರ್‍ನೋರು | ಇಲ್ಲ | ವೆಂಕಟಾಪುರ | ಕೂಲಿ |
| ೨. | ಲಸುಮಕ್ಕ | ೫೬ | ಗೊಲ್ಲರು | ಕಂಬೇರು | ಇಲ್ಲ | ವೆಂಕಟಾಪುರ | ಕೂಲಿ |
| ೩. | ಬಿ. ಎನ್. ಮಂಗಳಮ್ಮ | ೩೨ | ಗೊಲ್ಲರು | ಕಂಬೇರು | ಎಸ್.ಎಸ್.ಎಲ್.ಸಿ. | ವೆಂಕಟಾಪುರ | ಗೃಹಿಣಿ |
| ೪. | ಸತ್ಯಮ್ಮ | ೬೫ | ಗೊಲ್ಲರು | ಕಂಬೇರು | ಇಲ್ಲ | ವೆಂಕಟಾಪುರ | ಕೂಲಿ |
| ೫. | ಈರಮ್ಮ | ೭೦ | ಗೊಲ್ಲರು | ಮಾರ್‍ನೋರು | ಇಲ್ಲ | ಹೊಸಹಳ್ಳಿ | ಕೂಲಿ |
| ೬. | ಕಾಳಮ್ಮ | ೪೦ | ಗೊಲ್ಲರು | ಬೊಮ್ಮಗಳ್ಳ | ಇಲ್ಲ | ಹೊಸಹಳ್ಳಿ | ಕೂಲಿ |
| ೭. | ಬೊಮ್ಮಕ್ಕ | ೩೦ | ಗೊಲ್ಲರು | ಮಾರ್‍ನೋರು | ಇಲ್ಲ | ಹೊಸಹಳ್ಳಿ | ಕೂಲಿ |
| ೮. | ಬೊಮ್ಮಕ್ಕ | ೭೫ | ಗೊಲ್ಲರು | ಮಾರ್‍ನೋರು | ಇಲ್ಲ | ಹೊಸಹಳ್ಳಿ | ಕೂಲಿ |
| ೯. | ನಾಗಮ್ಮ | ೩೦ | ಗೊಲ್ಲರು | ಮಾರ್‍ನೋರು | ಇಲ್ಲ | ನಾಗಸಮುದ್ರ | ಕೂಲಿ |
| ೧೦. | ಪುಸಮಕ್ಕ | ೩೦ | ಗೊಲ್ಲರು | ಬೊಮ್ಮಗಳ್ಳ | ೫ನೇ ತರಗತಿ | ನಾಗಸಮುದ್ರ | ಕೂಲಿ |
| ೧೧. | ಚಿಕ್ಕ ನಾಗಮ್ಮ | ೪೫ | ಗೊಲ್ಲರು | ಬೊಮ್ಮಗಳ್ಳ | ಇಲ್ಲ | ನಾಗಸಮುದ್ರ | ಕೂಲಿ |
| ೧೨. | ಬೊಮ್ಮಕ್ಕ | ೬೫ | ಗೊಲ್ಲರು | ಮಾರ್‍ನೋರು | ಇಲ್ಲ | ಚಿಕ್ಕೇರ ಹಳ್ಳಿ | ಕೂಲಿ |
| ೧೩. | ದೊಡ್ಡ ಈರಮ್ಮ | ೪೫ | ಗೊಲ್ಲರು | ಮಾರ್‍ನೋರು | ಇಲ್ಲ | ಚಿಕ್ಕೇರ ಹಳ್ಳಿ | ಕೂಲಿ |
| ೧೪. | ತಿಪ್ಪಮ್ಮ | ೨೩ | ಗೊಲ್ಲರು | ಕಂಬೇರು | ೫ನೇ ತರಗತಿ | ಚಿಕ್ಕೇರ ಹಳ್ಳಿ | ಕೂಲಿ |

| | | | | | | | |
|---|---|---|---|---|---|---|---|
| ೧೫. | ತಿಪ್ಪೀರಮ್ಮ | ೧೮ | ಗೊಲ್ಲರು | ಕಂಬೇರು | ೧ನೇ ತರಗತಿ | ಚಿಕ್ಕೇರ ಹಳ್ಳಿ | ಕೂಲಿ |
| ೧೬. | ಸರಸ್ವತಿ | ೧೨ | ಗೊಲ್ಲರು | ಮಾರ್ನೋರು | ೧ನೇ ತರಗತಿ | ಚಿಕ್ಕೇರ ಹಳ್ಳಿ | ದನಕಾಯುವುದು |
| ೧೭. | ಲಕ್ಷ್ಮಿ | ೧೦ | ಗೊಲ್ಲರು | ಮಾರ್ನೋರು | ೧ನೇ ತರಗತಿ | ಚಿಕ್ಕೇರ ಹಳ್ಳಿ | ದನಕಾಯುವುದು |
| ೧೮. | ಬಣ್ಣಮ್ಮ | ೬೫ | ಗೊಲ್ಲರು | ಮಾರ್ನೋರು | ಇಲ್ಲ | ಚಿಕ್ಕೇರ ಹಳ್ಳಿ | ಕೂಲಿ |
| ೧೯. | ನೀಲಮ್ಮ | ೨೬ | ಗೊಲ್ಲರು | ಕಂಬೇರು | ಇಲ್ಲ | ಚಿಕ್ಕೇರ ಹಳ್ಳಿ | ಕೂಲಿ |
| ೨೦ | ಯರಗುಂಟಮ್ಮ | ೨೦ | ಗೊಲ್ಲರು | ಕಂಬೇರು | ಇಲ್ಲ | ಚಿಕ್ಕೇರ ಹಳ್ಳಿ | ಕೂಲಿ |
| ೨೧. | ಚಿತ್ತಮ್ಮ | ೧೭ | ಗೊಲ್ಲರು | ಕಂಬೇರು | ಇಲ್ಲ | ಚಿಕ್ಕೇರ ಹಳ್ಳಿ | ಕೂಲಿ |
| ೨೨. | ಈರಮ್ಮ | ೭೫ | ಗೊಲ್ಲರು | ಮೇರೆರಾಮ | ಇಲ್ಲ | ಚಿಕ್ಕೇರ ಹಳ್ಳಿ | ಕೂಲಿ |
| ೨೩. | ಚಿತ್ತಮ್ಮ | ೫೦ | ಗೊಲ್ಲರು | ಸೋಮನೋರು | ಇಲ್ಲ | ಹೊಸಕೋಟೆ | ಕುರಿಕಾಯುವುದು |
| ೨೪. | ಗಿಡ್ಡಕ್ಕ | ೨೮ | ಗೊಲ್ಲರು | ಸೋಮನೋರು | ೮ನೇ ತರಗತಿ | ಹೊಸಕೋಟೆ | ವ್ಯವಸಾಯ |
| ೨೫. | ಸಾವಿತ್ರಿ | ೨೨ | ಗೊಲ್ಲರು | ಕಂಬೇರು | ೩ನೇ ತರಗತಿ | ಹೊಸಕೋಟೆ | ಕೂಲಿ |
| ೨೬. | ಶಾಂತಮ್ಮ | ೮೦ | ಗೊಲ್ಲರು | ಚಿತ್ತನೋರು | ಇಲ್ಲ | ಹೊಸ ಕೋಟೆ | ಗೃಹಿಣಿ |
| ೨೭. | ಚಿತ್ತಮ್ಮ | ೩೫ | ಗೊಲ್ಲರು | ಕಂಬೇರ | ಇಲ್ಲ | ಹೊಸಕೋಟೆ | ಕೂಲಿ |
| ೨೮. | ಗಂಗಮ್ಮ | ೩೩ | ಗೊಲ್ಲರು | ಸೋಮ್ನೋರು | ಇಲ್ಲ | ಹೊಸಕೋಟೆ | ಕೂಲಿ |
| ೨೯. | ಗಂಗಮ್ಮ | ೬೦ | ಗೊಲ್ಲರು | ಕಂಬೇರು | ಇಲ್ಲ | ಪಿ.ಟಿ.ಹಟ್ಟಿ | ಕೂಲಿ |
| ೩೦. | ತಿಮ್ಮಕ್ಕ | ೭೦ | ಗೊಲ್ಲರು | ಚಿತ್ತನೋರು | ಇಲ್ಲ | ಪಿ.ಟಿ.ಹಟ್ಟಿ | ಕೂಲಿ |



ಋತುಮತಿಯಾದ ಬಾಲೆ ಗದ್ದಿಗೆ ಪೂಜೆ ಮಾಡುತ್ತಿರುವುದು



ಋತುಮತಿಯಾದ ಬಾಲೆ ಗಂಗೆ ಕೊಡ ತರುತ್ತಿರುವುದು



ಕಾಡು ಗೊಲ್ಲ ಮಹಿಳೆಯ ರವಿಕೆ ರಹಿತ ಉಡುಗೆ

# ಕಾಡುಗೊಲ್ಲ ಸಮುದಾಯದ ಮದುವೆ ಆಚರಣೆಗಳು



ಮದುವಣಗಿತ್ತಿಯನ್ನು ಕರೆದು ತರುತ್ತಿರುವುದು.



ಮುಹೂರ್ತ ಆದ ನಂತರ ಮನೆ ತುಂಬಿಸುವುದು.



ಕಂಕಣ ಕಟ್ಟುವುದು



ಹೆರಿಗೆಯಾದ ಮಹಿಳೆಯನ್ನು ಹಟ್ಟಿಯಿಂದ ಹೊರಗಿಟ್ಟಿರುವುದು



ಕಾಡುಗೊಲ್ಲ ಸಂಪ್ರದಾಯದ ಮದುವೆಯಲ್ಲಿ ಸುಣ್ಣೀರು ಹಾಕುವುದು



# ಕಾಡುಗೊಲ್ಲರ ಆರ್ಥಿಕ ಸ್ಥಿತಿ ಗತಿಯನ್ನು ಪ್ರತಿಬಿಂಬಿಸುವ ಚಿತ್ರಣಗಳು





ಕಾಡುಗೊಲ್ಲರು ವಾಸಿಸುತ್ತಿರುವ ಗುಡಿಸಲು



ಕಾಡುಗೊಲ್ಲರ ವಯೋವೃದ್ಧ ಮಹಿಳೆ- ನಿಂಗಮ್ಮ

